# ಮಾನಸ

ಸಂಪುಟ : 3

ಏಪ್ರಿಲ್—1990





**ವಿಳಾಸ "ಮಾನಸ" ತಿಂಗಳ ಪತ್ರಿಕೆ**
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ.)
ಬೆಂಗಳೂರು-560 067

**ಬಿಡಿಪ್ರತಿ : 2–00 ರೂ.**

**ಸೂಚನೆ : ವಾರ್ಷಿಕ ಚಂದಾ : 20 ರೂ.**
ಆಜೀವ ಚಂದಾ : 250 ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ.ಓ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ................**




ಮುಖಪುಟ : ಜಗದೀಶ್ ಅಮ್ಮುಂಜೆ



# ಸಂಪಾದಕೀಯ

ನ್ಯಾಯಾಲಯ ಅತ್ಯಾಚಾರದ ಪ್ರಕರಣಗಳನ್ನು ತೀರ್ಮಾನಿಸುವಾಗ ಆರೋಪಿಗಳು ಸ್ತ್ರೀಯ ಗತ ಚರಿತ್ರೆಯನ್ನು ಕೆದಕಿ ತೆಗೆಯುವುದರ ಹಾಗೂ ಅವನ್ನು ಪ್ರಮುಖ ಪುರಾವೆಯಾಗಿ ಬಳಸುವುದರ ವಿರುದ್ಧ ಮಹಿಳಾ ಸಂಘಟನೆಗಳು ಎತ್ತಿದ ದನಿ ಇತ್ತೀಚೆಗೆ ಸಂಪತ್ತನ್ನು ತಲುಪಿದೆ. ಅತ್ಯಾಚಾರದ ಪ್ರಕರಣಗಳಲ್ಲಿ ಸ್ತ್ರೀಯರ ಹಿನ್ನಲೆಯನ್ನು ಬಹಿರಂಗಗೊಳಿಸಿ ಅದನ್ನು ಅವಳ ವಿರುದ್ಧ ಅಸ್ತ್ರವಾಗಿ ಬಳಸುತ್ತಿರುವುದಕ್ಕೆ ದೀರ್ಘವಾದ ಇತಿಹಾಸವೇ ಇದೆ.

1979 ರಲ್ಲಿ ಮಥುರಾ, ರಮೀಜಾಬಿ ಹಾಗೂ ಮಾಯಾತ್ಯಾಗಿಯ ಪ್ರಕರಣಗಳಲ್ಲಿ ನ್ಯಾಯಾಲಯ ನೀಡಿದ್ದ ತೀರ್ಪನ್ನು ಪುನರ್ ವಿಮರ್ಶಿಸುವತೆಂ ಮಹಿಳಾ ಸಂಘಟನೆಗಳು ಮುಖ್ಯ ನ್ಯಾಯಾಧೀಶರಿಗೆ ಮನವಿಯೊಂದನ್ನು ಸಲ್ಲಿಸಿದ್ದೆವು. ಅತ್ಯಾಚಾರದ ಕಾನೂನಿನಲ್ಲಿದ್ದ ಮಿತಿಗಳು ಹಾಗೂ ಲೋಪದೋಷಗಳಿಂದಾಗಿ ನ್ಯಾಯ ಮಹಿಳೆಯರ ಕೈಯಿಂದ ಜಾರಿ ಹೋಗುತ್ತಿದೆಯೆಂದು ಸ್ತ್ರೀ ಸಂಘಟನೆಗಳು ವಾದಿಸಿದ್ದವು.

ಮಹಿಳಾ ಸಂಘಟನೆಗಳು ತಂದ ಭಾರಿ ಒತ್ತಡದಿಂದಾಗಿ ಸುಮಾರು 100 ವರ್ಷಗಳಿಂದ ನಿಂತ ನೀರಿನಂತಿದ್ದ ಕಾನೂನಿನಲ್ಲಿ ಹಲವಾರು ಬದಲಾವಣೆಗಳನ್ನು ತರಲು ಮುಂದಾಯಿತು. ಸಲಹೆ ಸೂಚನೆಗಳನ್ನು ನೀಡಲು ಕಾನೂನು ಸಮಿತಿಯನ್ನು ರಚಿಸಿದ್ದರೂ, ಸಮಿತಿ ನೀಡಿದ ಕೆಲವು ಸಲಹೆಗಳನ್ನು ಮಾತ್ರ ಒಪ್ಪಿಕೊಂಡು 1980ರಲ್ಲಿ ಹೊಸ ಕಾನೂನು ಜಾರಿಗೆ ಬಂದಿತು.

ಅತ್ಯಾಚಾರದ ಪ್ರಕರಣಗಳನ್ನು ತೀರ್ಮಾನಿಸುವಾಗ ನ್ಯಾಯಾಲಯ ಸ್ತ್ರೀಯ ಗತ ಜೀವನ ಚರಿತ್ರೆಯನ್ನು ಗಣನೆಗೆ ತೆಗೆದುಕೊಳ್ಳಬಾರದೆಂದು ಕಾನೂನು ಸಮಿತಿ ನೀಡಿದ ಸಲಹೆಯನ್ನು ಸರ್ಕಾರ ಕೈಬಿಟ್ಟಿತು. ನ್ಯಾಯಾಲಯದ ಕಟ್ಟೆಯೇರುವ ಪ್ರತಿಯೊಂದು ಅತ್ಯಾಚಾರದ ಪ್ರಕರಣದಲ್ಲಿಯೂ ಸ್ತ್ರೀಯ ಪೂರ್ವ ಚರಿತ್ರೆಯನ್ನು ಅವಳ ವಿರುದ್ಧ ಪ್ರಮುಖ ಅಸ್ತ್ರವಾಗಿ ಬಳಸಲಾಗುತ್ತಿದೆ. ಇದು ಸ್ತ್ರೀಯನ್ನು ವಿಕ್ಟಿಮ್ ಆಗಿಸುವ ಬದಲು ಅಪರಾಧಿಯನ್ನಾಗಿಸಿ ಮತ್ತಷ್ಟು ಜರ್ಜರಿತ ಗೊಳಿಸುತ್ತದೆ.

ಈ ಪ್ರಶ್ನೆಯನ್ನು ಪುನಃ ಮಹಿಳಾ ಸಂಘಟನೆಗಳು ಎತ್ತಿರುವುದು ಅತ್ಯಂತ ಸಕಾಲಿಕವಾಗಿದೆ. ಇದಕ್ಕೆ ಸಂಬಂಧಪಟ್ಟಂತೆ ಸರ್ಕಾರ ಖಚಿತವಾದ, ನಿಖರವಾದ ನಿಲುವನ್ನು ತಳೆಯದಿರುವುದು ಸರ್ಕಾರದ ಧೋರಣೆಯನ್ನು ಸ್ಪಷ್ಟಪಡಿಸುತ್ತಿದೆ. ನ್ಯಾಯಾಲದಯದಲ್ಲಿ ಸ್ತ್ರೀಯ ಪೂರ್ವ ಚರಿತ್ರೆಯನ್ನು ಬಳಸುವುದನ್ನು ಪ್ರತಿಬಂಧಿಸುವುದೆಂದರೆ ಕಾನೂನಿನಲ್ಲಿ ಮೂಲಭೂತ ಬದಲಾವಣೆಯನ್ನು ನಿರೀಕ್ಷಿಸುವುದೆಂದರ್ಥ. ಅದು ಮಾತ್ರ ನೊಂದ ಮಹಿಳೆಯರಿಗೆ ಕಿಂಚಿತ್ತಾದರೂ ನ್ಯಾಯ ಪಡೆಯುವ ಭರವಸೆಯನ್ನು ನೀಡಿದಂತಾಗುತ್ತದೆ.

# ಲಂಕೇಶರ ಸಾಹಿತ್ಯದಲ್ಲಿ ಹೆಣ್ಣಿನ ಪರಿಕಲ್ಪನೆ

ಚಂಪಾಪತಿ ಹೆಚ್. ಎಸ್.

ಸ್ತ್ರೀ ಸಂವೇದನೆ, ಸ್ತ್ರೀತ್ವ ಎಂಬುದು ಸಾಹಿತ್ಯದಲ್ಲಿ ಇರುತ್ತದೆಯೇ ಎಂಬ ಪ್ರಶ್ನೆ ಕಾಣಿಸಿಕೊಳ್ಳುವ ಹಂತದಲ್ಲಿಯೇ-ಇದಕ್ಕೆ ಪೂರಕವಾದ ಸಂಸ್ಕೃತಿ ಇತ್ತೆ, ಇದೆಯೇ ಎಂಬ ಪ್ರಶ್ನೆಯೂ ಮುಖ್ಯವಾಗುತ್ತದೆ. ಹೀಗೆ ಇದೆಯೇ, ಇತ್ತೆ ಎಂಬ ಪ್ರಶ್ನೆಗೆ ನಾವು ಇತಿಹಾಸದ ಪುಟಗಳಿಂದ ಹಾಗೂ ಸಮಕಾಲಿನ ಸಾಹಿತ್ಯದಿಂದ ಅಭ್ಯಸಿಸುವುದು ಅಗತ್ಯವಾಗುತ್ತದೆ. ಅನಂತಮೂರ್ತಿ, ಲಂಕೇಶರು ಹೆಣ್ಣು-ಗಂಡಿನ ಪ್ರಶ್ನೆಯ ಸುತ್ತ ಸಾಹಿತ್ಯದಲ್ಲಿ, ಮಹತ್ವದ ಪಾತ್ರ ವಹಿಸಿದ ಲೇಖಕರು 'ಹೆಣ್ಣಿನ ಸಂವೇದನೆ'ಯ ಎಳೆಗಳು ಇವರ ಸಾಹಿತ್ಯ ರಚನೆಯಲ್ಲಿ ಎಷ್ಟರಮಟ್ಟಿಗೆ ಕಂಡುಬರುತ್ತವೆ?

ಲಂಕೇಶ್ ಹಾಗೂ ಅನಂತಮೂರ್ತಿ ನವ್ಯ ಸಾಹಿತ್ಯದ ಪರಿಕರಗಳ ಮೂಲಕ ಒಟ್ಟಾಗಿ ಸಾಹಿತ್ಯಕ್ಕೆ ಪ್ರತಿಕ್ರಿಯಿಸಿದ್ದರಿಂದ, ಲಂಕೇಶರ ಬರಹಗಳ ಹೆಣ್ಣಿನ ಪಾತ್ರದ ವಿಶ್ಲೇಷಣೆಯನ್ನು ಅನಂತಮೂರ್ತಿಯವರ ಬರಹಗಳ ಹೆಣ್ಣು ಪಾತ್ರದ ವಿಶ್ಲೇಷಣೆಯ ಜೊತೆಗೇ ನಡೆಸುವುದು ಅನೇಕ ಪ್ರಶ್ನೆಗಳಿಂದ ನನಗೆ ಅಗತ್ಯವಾಗಿ ಕಾಣುತ್ತದೆ. ಅಂತರ್‌ಮುಖ ವ್ಯಕ್ತಿವಾದಕ್ಕೆ ಸ್ಪಂದಿಸುವ ಸಂದರ್ಭದಲ್ಲೂ ಇವರ ಜೀವನ ಗ್ರಹಿಕೆಯ ಸ್ತರಗಳ ಮಜಲುಗಳು ಬೇರೆ ಬೇರೆಯಾಗಿರುವುದರಿಂದ, ಲಂಕೇಶ್ ಹಾಗೂ ಅನಂತಮೂರ್ತಿಯವರ ಸ್ತ್ರೀ ಪಾತ್ರದ ಚಿತ್ರಣಗಳಲ್ಲೂ ನಿಖರವಾಗಿರುವ ವ್ಯತ್ಯಾಸಗಳು ಕಂಡುಬರುತ್ತವೆ. ಅನಂತಮೂರ್ತಿಯವರ ಕತೆಗಳ ಚೌಕಟ್ಟು ಹೆಚ್ಚು ಕಡಿಮೆ ವೈಚಾರಿಕ ಯುವಕನ ಪ್ರಜ್ಞೆಯ ಮುಖಾಂತರ ಬಿಚ್ಚಿಕೊಳ್ಳುವುದರಿಂದಲೇ, ಇತರ ಪಾತ್ರಗಳಂತೆ ಹೆಣ್ಣು ಪಾತ್ರಗಳೂ ಪೋಷಕ ಪ್ರಜ್ಞೆ, ಪೋಷಕ ದ್ರವ್ಯವಾಗಿ ಇವರ ಸಾಹಿತ್ಯದಲ್ಲಿ ಮೂಡಿಬರುವುದು. ಈ ವೈಚಾರಿಕತೆಯೇ ಇವರ ಒಟ್ಟು ಸಾಹಿತ್ಯದ ವಿಷನ್‌ಗೆ ಮಿತಿಯಾಗಿಬಿಡುತ್ತದೆ. [ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಈ ವೈಚಾರಿಕತೆ ನೀಡಿರುವ ಕೊಡುಗೆಯನ್ನು ನಾನು ಇಲ್ಲಿ ನಿರಾಕರಿಸುತ್ತಿಲ್ಲ]. ಜೀವನದ ಸಂದರ್ಭದಲ್ಲಿ ತೆಕ್ಕೆ ಹಾಕಿಕೊಳ್ಳಲು ಈ ವೈಚಾರಿಕತೆ ನಿರಾಕರಿಸುತ್ತದೆ. ಅಥವಾ ಜೀವನದ ಸಂದರ್ಭವನ್ನೇ ಬದಲಾಯಿಸಿಬಿಡುವ ಮಿಸ್ಟಿಕ್ ವಿಷನ್‌ನ ಸಾಧ್ಯತೆಯನ್ನು ವೈಚಾರಿಕತೆಯಲ್ಲಿ ಕಲೆಯಾಗಿಸುವ ಕಲೆಗಾರಿಕೆ ದಕ್ಕದೇ ಇರುವುದರಿಂದ, ಅನಂತಮೂರ್ತಿಯವರ ಹೆಣ್ಣು ಪಾತ್ರಗಳು ಸಮೀಕರಣಗಳಾಗುವುದು. ಜಾತಿ-ಸಮಸ್ಯೆಯ ಕಟ್ಟುಪಾಡುಗಳು ಲೈಂಗಿಕತೆಯ ಸಂದರ್ಭದಲ್ಲಿ ಮೀರಿ ನಿಲ್ಲುತ್ತಿವೆ ಎಂಬ ಇವರ ವೈಚಾರಿಕತೆ–ಲಾರೆನ್ಸ್‌ನ ರೀತಿ-ಮೇಲ್ಜಾತಿ ಯುವತಿ/ಯುವಕ, ಕೆಳಜಾತಿ ಯುವತಿ/ಯುವಕನೊಡನೆಯ ಮುಕ್ತ ಸಂಬಂಧದ ಮೂಲಕ ಹೇಳುವ ಹಿನ್ನೆಲೆಯಲ್ಲಿಯೇ ಶಿಶ್ನಪ್ರಜ್ಞೆ, ಪುರುಷನ ಹಿರಿಮೆಯನ್ನು ವಿಜೃಂಭಿಸುವ ಪಿತೃಪ್ರಧಾನ ಮೌಲ್ಯಗಳು ಛಾಪು ಪಡೆದುಕೊಳ್ಳುತ್ತವೆ. ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಮುಖ್ಯವೆನಿಸುವ ಈ ವೈಚಾರಿಕತೆ, ಇನ್ನೊಂದು ಸಂದರ್ಭದಲ್ಲಿ ಮತ್ತೆ ಕೆಲವು ಸಮಸ್ಯೆಗಳನ್ನು ಎತ್ತುವಂತಹುದಾಗಿರುತ್ತದೆ. ಹಾಗಾಗಿಯೇ ಸಾಹಿತ್ಯದ ಒಟ್ಟು ವಿಷನ್‌ಗೆ ಈ ವೈಚಾರಿಕತೆಯೇ ಮಿತಿಯಾಗುತ್ತದೆ ಎಂದು ನಾನು ಹೇಳಿದ್ದು. ಸ್ತ್ರೀಯ ಪಾತ್ರ ಚಿತ್ರಣದಲ್ಲಿ ಯಾವ ವೈಚಾರಿಕತೆ ಅನಂತಮೂರ್ತಿಯವರ ಒಟ್ಟು ಸಾಹಿತ್ಯದ ವಿಷನ್‌ಗೆ, ಕಲೆಗಾರಿಕೆಗೆ ಮಾರಕವಾಗಿದೆಯೋ, ಅದರಿಂದ ಪಾರಾಗಿರುವುದೇ ಲಂಕೇಶರ ಸ್ತ್ರೀ ಪಾತ್ರಗಳ ಚಿತ್ರಣದ ಕಲೆಗಾರಿಕೆಯಲ್ಲಿ ಹಾಗೂ ಒಟ್ಟು ವಿಷನ್‌ನಲ್ಲಿ ಇರುವ ಪಾಸಿಟೀವ್ ಅಂಶಗಳು. ಈ ಹಿನ್ನೆಲೆಯಲ್ಲಿಯೇ ಲಂಕೇಶರ ಸ್ತ್ರೀ

ಪಾತ್ರಗಳು ವರ್ಗ, ಜಾತಿ, ಕೆಲವು ಮೌಲ್ಯಗಳೊಡನೆ ಸಮೀಕರಣ ಹೊಂದುವುದಿಲ್ಲ. ಕೇಂದ್ರ ಪಾತ್ರಕ್ಕೆ ಪೋಷಕ ದ್ರವ್ಯವಾಗಿ ಮಾತ್ರ ಉಳಿಯುವುದಿಲ್ಲ. ಜೀವಂತ ಪಾತ್ರಗಳಾಗುತ್ತವೆ.

ಪಾತ್ರಗಳು ಸಪ್ಪೆಯಲ್ಲ ಎನ್ನುವುದು, ಜೀವಂತಿಕೆ ಹೊಂದಿರುತ್ತವೆ ಎನ್ನುವುದರ ಮೂಲಕ, ಲಂಕೇಶ್ ರವರಿಗೆ ಸಾಹಿತ್ಯದ ಗ್ರಹಿಕೆಯಲ್ಲಿ ಪರಿಪೂರ್ಣ ಆಂಡ್ರೋಜಿನಸ್ ಮೈಂಡ್ ಇದೆ ಎನ್ನುವುದು ನನ್ನ ವಾದವಲ್ಲ. ಅನಂತಮೂರ್ತಿಯವರ ಪಾತ್ರಗಳ ರೀತಿ ಅಪೂರ್ಣವಲ್ಲವಾದರೂ, ಲಂಕೇಶರ ಹೆಣ್ಣು ಪಾತ್ರಗಳು ಬೇರೆ ರೀತಿಯ ಪರಿಮಿತಿಗಳಿಂದ ಅಭಿವ್ಯಕ್ತಿಗೊಳ್ಳುತ್ತಾರೆ. ಇವರ ಸಣ್ಣ ಕತೆಗಳು, ನಾಟಕಗಳು, ಚಿತ್ರಪ್ರಧಾನ ಮೌಲ್ಯಗಳ ಹಿನ್ನೆಲೆಯಲ್ಲಿಯೇ, ಮಧ್ಯಮವರ್ಗದ ಆಶಯಗಳಲ್ಲಿ ಹಾಗೂ ವ್ಯಕ್ತಿಯ ಅಂತರ್ ಮುಖತ್ವದಲ್ಲೇ ಮೂಡಿಬಂದಿವೆ. ಹೆಣ್ಣು/ಗಂಡು ಸಂಬಂಧದ ಬಗ್ಗೆ ಸಾಹಿತ್ಯದಲ್ಲಿ ಆಳವಾಗಿ ಆತಿ ಕೆಡಿಸಿಕೊಂಡ ಈ ಲೇಖಕರಲ್ಲಿ ಟಾಲ್‌ಸ್ಟಾಯ್‌ನ ಅನ್ನಾನ್ ವಿಷನ್ ಆಗಲೀ ಡಾಸ್ಟೋವಸ್ಕಿಯ ಸೋನಿಯ ವಿಷನ್ ಆಗಲೀ ದಕ್ಕಿಲ್ಲ ಎಂಬುದರ ಪರಿಧಿಯಲ್ಲಿಯೇ ಲೇಖಕರ ಭಾಷೆ, ಬದುಕಿನ ವಿಷನ್, ಕಲೆಗಾರಿಕೆ ಎಲ್ಲದರ ಮಿತಿಯನ್ನು ಪ್ರಶ್ನಿಸಬೇಕಾಗುತ್ತದೆ. ಈ ಹಂತದಲ್ಲಿ ಲಂಕೇಶರ 'ಮುಸ್ಸಂಜೆಯ ಕಥಾ ಪ್ರಸಂಗ', ಕಲೆ ಹಾಗೂ ವಿಷನ್ ಎರಡೂ ದೃಷ್ಟಿಯಿಂದ ತೃಪ್ತಿಕರ ಬರವಣಿಗೆ.

* * *

'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥಾ ಸಂಗ್ರಹದ 'ಕುರುಡು-ಕಾಂಚಾಣ', 'ಎಂಟು-ಮೂವತ್ತು,ಐವತ್ತು' 'ನಮ್ಮ ನಡುವಿನ ಹುಡುಗ' 'ವಾಮನ' —ಈ ನಾಲ್ಕು ಕತೆಗಳ ಸ್ತ್ರೀ-ಪಾತ್ರಗಳ ಹಿಂದಿರುವ ಗ್ರಹಿಕೆ ಒಂದೇ. ಈ ನಾಲ್ಕು ಕತೆಗಳ ಹಂದರ ಅತಿಪ್ರಜ್ಞೆ ಕಾಡುವ ಯುವಕನ ಪ್ರಜ್ಞಾವಲಯ. ದ್ವಂದ್ವ ಇರುವ ಮಧ್ಯಮ ವರ್ಗದ ಯುವಕ ಆದರ್ಶವಾದಿ ಹೌದು-ಅಲ್ಲ. ಅಪ್ಪನ ಶವಸಂಸ್ಕಾರಕ್ಕೆ ಐದು ರೂ ಕೇಳುವ ಕ್ಷೌರಿಕನಿಗೆ ಐದು ರೂಪಾಯಿ ಕೊಡುವ, ಕೊಡದೇ ಇರುವ ಮಧ್ಯಮ ವರ್ಗದ ಹತಾಶೆಯ ಆದರ್ಶಗಳ ನಾಯಕನ ಹೆಂಡತಿ ಪಾರ್ವತಿ ಹೆಚ್ಚು ಪ್ರಾಕ್ಟಿಕಲ್ ಆಗಿಬಿಡುತ್ತಾಳೆ. ಹಾಗೆಯೇ 'ನಮ್ಮ ನಡುವಿನ ಹುಡುಗ' ದಲ್ಲಿ ನೀಲಾ ಸಹ ಹೆಂಡತಿಯ ಮಾತಿಗೆ ವಿರುದ್ಧವಾಗಿ 'ಮರುಳ' ನನ್ನು ಶಾಲೆಗೆ ಕಳುಹಿಸಿದ ನಾಯಕ: 'ಮರುಳ' ಮರಳಿ ಬರೆದಿದ್ದಾಗ ಚಿಂತೆಗೀಡಾಗಿ ಎಲ್ಲೆಲ್ಲೋ ಸುತ್ತುತ್ತಾನೆ. ಕೊನೆ ಲೀಲಾಳ ವ್ಯವಹಾರ ವಾಸ್ತವತೆಯ ಪ್ರಜ್ಞೆಯನ್ನು ಮೆಚ್ಚುವ ಹಂತ ತಲುಪುತ್ತಾನೆ, ಇಲ್ಲಿಯ ಅತಿಪ್ರಜ್ಞೆ ಕಾಡದ ಹೆಂಡತಿಯ ಬಗ್ಗೆ ಉಪೇಕ್ಷಿಭಾವ ಕಂಡು ಬರುವುದರ ಜೊತೆಗೆ, ಆದರ್ಶಗಳು ಫಲಿತವಾಗದೇ ಹೋಗುವಾಗ, ಅವರ ವ್ಯವಹಾರಿಕ ವಾಸ್ತವತೆಯನ್ನು ಒಪ್ಪಿಕೊಂಡುಬಿಡುವ ಧೋರಣೆಯೂ ಇಲ್ಲಿ ಕಂಡುಬರುತ್ತದೆ. ಅತಿಪ್ರಜ್ಞೆ, ತಂಡದಹೆಂಗಸರು ಹೆಚ್ಚು ವ್ಯಾವಹಾರಿಕಜ್ಞಾನ ಉಳ್ಳವರಾಗಿರುತ್ತಾರೆ ಎಂಬ ಧೋರಣೆಯನ್ನು ಈ ರೀತಿಯ ಕತೆಗಳು ಹೇಳುತ್ತವೆ. 'ವಾಮನ' ಕತೆಯ ಕೆಲವು ಸಾಲುಗಳು ಹೀಗಿವೆ: 'ಹೆಂಡತಿ ಅವನ ಪಾಲಿಗೊಂದು ಸೊನ್ನೆ', I can't see you, I can't feel you, you are nothing, Nil. ಅತ್ತಳು ಆಕೆ. ಆಗ ತುಸು ಸಮಾಧಾನವಾಯಿತು. ಆಕೆ ಅತ್ತರೆ ಅದು ನನ್ನ ತಪ್ಪಲ್ಲ. ಆಕೆಗೆ ನನ್ನ ಮನಸ್ಸು ಅರ್ಥವಾಗದಿದ್ದರೆ ನಾನು ಜವಾಬ್ದಾರನಲ್ಲ ! (ಪು)

ಒಂದು ಸಂಸ್ಕೃತಿಯಲ್ಲಿ ಗಂಡು-ಹೆಣ್ಣಿನ ಮಾನಸಿಕ ಸಿದ್ಧತೆಗಳನ್ನು, ಕೌಟುಂಬಿಕ ರಚನೆಯನ್ನು ಹೇಳುವ ಪಕ್ವ ಭಾಷೆ ಹಾಗೂ ಭಾವನೆಗಳಿವು, ಅತಿಪ್ರಜ್ಞೆ ಕಾಡುವ ಯುವಕನಿಗೆ ಹಾಗಿರದ ಹೆಂಡತಿ ಅಸ್ತಿತ್ವವಿಲ್ಲದಂತೆ ಸೊನ್ನೆ. ಆಕೆ ಅಳುವುದರಿಂದ ಈತನ ಅಹಂ ತೃಪ್ತಿ ಪಡೆಯುತ್ತದೆ. ಕುಟುಂಬ ಆತನ ಮಾನಸಿಕ ಸ್ಥಿರತೆಯ ಸಂಸ್ಥೆ ಅಲ್ಲ. ಅವನ ಬೇರೆಲ್ಲ ಬೇಡಿಕೆಗಳನ್ನು ಪೂರೈಸುವ ಒಂದು ಸಂಸ್ಥೆಯಾಗಿ ಬಿಡುತ್ತದೆ ಅಷ್ಟೇ !

'ಸರಿರಾತ್ರಿಯಲ್ಲಿ ಲೇಖಕ ಇದ್ದಕ್ಕಿದಂತೆ ಎಚ್ಚರಗೊಂಡು ಸುತ್ತ ಕಣ್ಣು ಹೊರಳಿಸಿದರೆ, ಮೇಜಿನಮೇಲೆ ಪ್ರಕಾಶಮಾನವಾಗಿ ಮೇಣದ ಬತ್ತಿ ಉರೀತಾ ಇದೆ. ಮನಸ್ಸಿಗೆ ವಿಷಯಗಳು ಮುತ್ತಿಕೊಂಡು, ಹೆಂಡತಿಯ ಬಳಿ ಹೋಗೋಣ ಎಂಬ ಆಶೆ........ ಆದರೆ ಅಲ್ಲಿ ಮಗಳಿದ್ದಾಳೆ......ಹೆಂಡತಿಯ ಮನಸ್ಸು ಸರಿಯಿಲ್ಲ.... ಡಾಕ್ಟರ್ ಬೇಡವೆಂದಿದ್ದಾರೆ............ ಬಾಗಿಲಿಗೆ ಆಚೆಯಿಂದ ಬೋಲ್ಟ್ ಹಾಕಿದೆ....... ಗೋಡೆಯ ಸುತ್ತ ಒತ್ತಿಯ ಬೆಳಕು ಮೇಲೆ... ದೂರಕ್ಕೆ...., ಕಗ್ಗತ್ತಲು ನಿರಾಸೆ.... ಮನಸ್ಸಿನ ವಿಷಯಗಳಿಗೆ 'ವಸ್ತು' ವಾಗಿ ಬಿಡುತ್ತಾಳೆ ಇಲ್ಲಿ ಹೆಣ್ಣು. ಲೇಖಕನಾಗಿ ಹೆಚ್ಚು ಅಧಿಕಾರ ಚಲಾಯಿಸಲಾಗದ, ತನ್ನ ದೊಡಸ್ತಿಕೆಯನ್ನು ಮೆರೆಸಲಾಗದ ಸಂಜೀವಯ್ಯನಿಗೆ ಲೈಂಗಿಕ ಭಾವನೆಗಳು ಅಧಿಕಾರದ ಭರವಸೆ ಕೊಟ್ಟುಬಿಡುತ್ತದೆ. ಸಾರ್ವತ್ರಿಕ ಅಧಿಕಾರದ

ಭ್ರಮೆಯಾದಾಗ,ನಿರಸನವಾದಾಗ,ವೈಯಕ್ತಿಕ ರಾಜಕಿಯಗಳು, ಲೈಂಗಿಕ ಅಧಿಕಾರಗಳು ತೃಪ್ತಿ ಕೊಡುತ್ತವೆ. ಸಾರ್ವಜನಿಕ ಅಧಿಕಾರದ ನಿರಾಸೆ, ಹೇಗೆ ವೈಯಕ್ತಿಕ ಲೈಂಗಿಕ ಸಂಬಂಧದ ಅಧಿಕಾರದ ಆಸೆಯನ್ನು ಹೆಚ್ಚಿಸುತ್ತದೆಯೋ ಹಾಗೆಯೇ ಸಾವಿನ ಭೀಕರತೆಯ ನೆನಪೂ ಸಹ, ಗಂಡಿನಲ್ಲಿ ಹೆಣ್ಣನ್ನು ಭೋಗದ ವಸ್ತುವನ್ನಾಗಿಸುವ ಕಲ್ಪನೆಯನ್ನು ಹುಟ್ಟುಹಾಕಬಹುದು. ಹಾಗೆಯೇ ಆಕ್ರಮಣಕಾರಿ ಶಕ್ತಿಯನ್ನು ಪ್ರೇರೇಪಿಸಬಹುದು.ಇದು ಗಂಡಿನಲ್ಲಿರುವ 'ಅಧಿಕಾರ'ದ ಬಗೆಗಿನ ಆಸೆಯ ಮಾನಸಿಕತೆಯಲ್ಲಿ ವ್ಯಕ್ತವಾಗುವ ಅಂಶಗಳು. 'ಕೊನೆ' ಕತೆಯ ನಾಯಕ ಉಜ್ಜ ಅಪ್ಪನೊಡನೆ ಜಗಳವಾಡಿ ಸಾಯುವ ನಿರ್ಧಾರ ಮಾಡುತ್ತಾನೆ. ಇಲ್ಲಿ ಸಾಯುವ ಯೋಜನೆಯೇ ಅವನಿಗೆ ಲಕ್ಷುರಿ ಆಗಿಬಿಡುತ್ತದೆ. ಹೇಗಿದ್ದರೂ ಸಾಯುತ್ತೇನಲ್ಲ ಅನ್ನುವ ಉಡಾಫೆತನ ಎಲ್ಲವನ್ನು ಭೋಗಿಸಿಬಿಡಬೇಕು ಎನ್ನುವ ಆತನ ಆಸೆಗೆ ತಕ್ಷಣ ವಸ್ತುವಾಗುವವಳು ಹೆಣ್ಣು. ಹಾಗೆಯೇ ಆಕ್ರಮಣಕಾರಿ ಶಕ್ತಿಗೆ ಒಳಗಾಗುವವಳು ಸಹ.

ಅವನ ದೇಹಕ್ಕೆ ಆತನ ವ್ಯಕ್ತಿತ್ವದಿಂದ ಬೇರೆಯಾದ ಸ್ವಂತ ಬುದ್ಧಿಯಿತ್ತೆಂದು ಕಾಣುತ್ತದೆ. ಸಾವಿನ ಹತ್ತಿರ ಮಾಂಸದ ಪ್ರತಿ ಕಣವೂ ಜಾಣ. ಹೋಗಿ ಸೊಂಟಕ್ಕೆ ಕೊಂಡಿ ಹಾಕಿದ ಕೈಗಳು, ಬೆನ್ನಿಗೆ ಒತ್ತಿಕೊಂಡ ಮುಖ. ಆಕೆಯನ್ನು ಬದುವಿನ ಕೆಳಕ್ಕೆ ಬೀಳಿಸಿಕೊಳ್ಳುವ ಹೊತ್ತಿಗೆ ಪಾರ್ವತಿ ಬುಟ್ಟಿಯನ್ನೆಸೆದು ಕೊಸರಿಕೊಳ್ಳುತ್ತಾ ಚೀರಿದಳು, ಬಿಡಲಿಲ್ಲ ಉಜ್ಜ. ಸೀರೆಯನ್ನೆಳೆದು ಬಿಸಾಕಿ ಅಪ್ಪಿ ಕಚ್ಚಿದ. ಕೂಗಿದಳು. ಇವನೂ ಇಕ್ಕಿದ. ಮುತ್ತಿಕ್ಕಿದ. ತೋಳು, ಎದೆ, ತೊಡೆ. ಲಗ್ನವಾದರೆ ವರ್ಷವೆಲ್ಲ ಕೊಡಲಾರದಷ್ಟು ಮುತ್ತು' (ಪು 63)

ಹುಲಿಯ ಭಯದಲ್ಲಿ ಓಡುತ್ತಿದ್ದ ಗಂಗೆ.... 'ಹುಲಿ ಹುಲಿ, ನನ್ನ ಕಂದನ್ನ ತಿಂದೀತು. ಬಿಡಪ್ಪೋ... ನಾ ಹೋಗ್ಬೇಕು... ಎಂಬ ಭಯದಿಂದ ತತ್ತರಿಸುತ್ತಿದ್ದರೂ ಮನೆಯ ಕಡೆ ಓಡಲೆತ್ನಿಸುತ್ತಿದ್ದ ಅವಳನ್ನು ಎದೆಗೆ ಅವಚಿಕೊಂಡು, ಬಿಗಿಯಾಗಿ ಒತ್ತಿ. ಕುಂಡಿ ಮೇಲೆ ಕೈ ಕಳುಹಿಸಿದ.... ಗಂಗೆ ಒಮ್ಮೆಗೇ ಸಿಡಿದೆದ್ದು ಅಪ್ಪುಗೆ ಸಡಿಲುವ ಹಾಗೆ ಕೊಸರಿಕೊಂಡು ಚಟಾರನೆ ಅವನ ಕೆನ್ನೆಗೆ ಕೊಟ್ಟಳು. (ಪು. 64)

ಹೀಗೆ ಪುರುಷನ ಆಕ್ರಮಣಕಾರಿ ಶಕ್ತಿಗೆ ಮಾನಸಿಕವಾಗಿ, ದೈಹಿಕವಾಗಿ ಹತ್ತಿರದಲ್ಲಿ ಸಿಗುವವಳು ಹೆಣ್ಣು.

ಇದೇ ಕಥಾ ಸಂಕಲನದ ಎರಡು ಕತೆಗಳ ನೆರೇಟಿವ್ ಸ್ಟೈಲ್ ಬದಲಾಗಿದ್ದು, ಹೆಣ್ಣಿನ ಪ್ರಜ್ಞೆಯಲ್ಲಿ ನಡೆಯುತ್ತವೆ. "ಗೊಮ್ಮಟೇಶ" ಕತೆಯ ನಾಯಕಿ ಮೊದಲಿನಿಂದ ಕೊನೆಯವರೆಗೆ ಉಚ್ಚೆ ಹೊಯ್ಯಬೇಕೆನ್ನುವ ತಳಮಳವೇ ಕಡೆಗೆ ಸಾಂಕೇತಿಕವಾಗಿದೆ. ಅವಳ ಗೆಳತಿಯರು ಗೆಳೆಯರೊಡನೆ ಸರಾಗವಾಗಿ ಬಿದ್ದು ಬಿದ್ದು ಓಡಾಡುತ್ತಿರುವಾಗ, 'ಉಚ್ಚೆ ಹೊಯ್ದಿಲ್ಲ ಕಣೆ ಅಲಮೇಲು' ಎಂಬುದು ಇವಳ ಆತಂಕ. "ನನಗೆ ಎಲ್ಲಕ್ಕಿಂತ ಹೆಚ್ಚಾಗಿ ಉಚ್ಚೆ ಹೊಯ್ದು ಒಂದು ಕಡೆ ಮಲಗುವಾಸೆ". ಇವಳ ಲೈಂಗಿಕ ಅಭಿವ್ಯಕ್ತಿಯ ರಿಜಿಡಿಟಿ ಕೂಡಾ ಈ ಕ್ರಿಯೆಯಲ್ಲಿ ವ್ಯಕ್ತವಾಗುತ್ತಾ ಹೋಗುತ್ತದೆ. 'ಉಚ್ಚೆ ಹೊಯ್ಯುವ ಕ್ರಿಯೆಯೇ ನಾಚಿಕೆಯ ಸಂಗತಿ ಎನ್ನುವ ಹೆಣ್ತನದ ಬಗ್ಗೆ ಕೀಳರಿಮೆ ಹುಟ್ಟಿಸುವ ಸಾಮಾಜಿಕ ಪರಿಸರದಲ್ಲಿ ಇವಳ ಸಹಜ ಅಭಿವ್ಯಕ್ತಿಗಳು ಹತ್ತಿಕ್ಕಲ್ಪಟ್ಟಿವೆ. ಅಲಮೇಲು ನಂದಿಯಮೇಲೆ ಬಿದ್ದು ಮಾತನಾಡುವ ರೀತಿ ಈಕೆ ಮಾತನಾಡಲಾರಳು. ಹೀಗೆ ಸಹಜ ಅಭಿವ್ಯಕ್ತಿ ಇರದೇ ಮುದುಡಿಕೊಂಡ ಈಕೆಯ ವ್ಯಕ್ತಿತ್ವ 'ಗೊಮ್ಮಟೇಶ' ಸಾಂಕೇತಿಕವಾಗುತ್ತಾನೆ.

> **ಜಾನಪದ ಸಾಹಿತ್ಯದಲ್ಲಿ ಮಹಿಳೆಯರು ವ್ಯಾಖ್ಯಾನಕಾರರಾಗಿ ಬಹಳ ಮುಖ್ಯವಾದ ಪಾತ್ರವನ್ನು ವಹಿಸಿದ್ದರು. ಕೆಲವು ಸಂಸ್ಕೃತಿಗಳಲ್ಲಿ ವಿಶೇಷವಾತ ಆಫ್ರಿಕದಲ್ಲಿ, ಭಾರತದಲ್ಲಿ ವಯಸ್ಸಾದ ಹೆಂಗಸರು ಒಳ್ಳೆಯ ಕಥೆಗಾರರೆಂದು ಹೆಸರಾಗಿದ್ದಾರೆ.**

"ಕ್ರಮೇಣ ನಿದ್ರೆ ಹತ್ತಿದಂತೆ, ಅವರ ಸದ್ದು ದೂರಕ್ಕೆ ದೂರಕ್ಕೆ ಹೋದಂತಾಗಿ, ಎಲ್ಲೋ ಗೋರಿಯಲ್ಲಿ ಶಬ್ದವಾದಂತೆ ಕಂಡು. ಅದೂ ಇಲ್ಲವಾಗಿ, ಉರುಳಿ ಬಂದ ಸೊನ್ನೆಯೊಂದು ಬಂಡೆಯಾಯಿತು. ಗೊಮ್ಮಟೇಶನಾಯಿತು. ಬತ್ತಲೆ ನಿಂತು ನನ್ನೆದುರು ನಾನೆಂದೂ ಅನುಭವಿಸದ ಎದೆಯಲ್ಲಿ ಮಿಂಚು ಮೂಡಿಸಿತು. ಮಂದಹಾಸವನ್ನು ಆಕೃತಿ ಅರಳಿಸಿತು".

ಒಂದು ಘಟ್ಟದಲ್ಲಿ ಸಹಜ ಅಭಿವ್ಯಕ್ತಿಯಾಗಬೇಕಾಗುವ 'ಲೈಂಗಿಕ' ಹೆಣ್ಣಿನ ವ್ಯಕ್ತಿತ್ವ ರೂಪಿಸಿಬಿಡುವ ಕ್ರಿಯೆಯಾಗಿ ಬಿಡುತ್ತದೆ, ಲೈಂಗಿಕತೆಯ ಅಭಿವ್ಯಕ್ತಿಯ ಸ್ವಾತಂತ್ರ್ಯ ಪಡೆದುಕೊಳ್ಳುವಲ್ಲಿ, ಆ ರೀತಿಯ ಆಂತರಿಕ

ಸ್ವಾತಂತ್ರ್ಯವನ್ನು ಹೊಂದುವ ಹಂತದಲ್ಲಿಯೇ ಆಕೆಯ ಬದುಕಿನ ತೃಪ್ತಿಗಳು ಕಾಣಿಸಿಕೊಂಡು ಬಿಡುತ್ತವೆ. ಈ ರೀತಿಯ ಸಾಮಾಜಿಕ, ಸಾಂಸ್ಕೃತಿಕ ಕಟ್ಟುನಿಟ್ಟಿಗಳು ಒಂದು ಹಂತದಲ್ಲಿ ಲೇಖಕರ ಮನಸ್ಸಿನಲ್ಲಿ ಒಡಮೂಡಿದ್ದನ್ನು, ಹಾಗೂ ಪ್ರತಿಫಲಗೊಂಡಿರುವುದನ್ನು ನಾವು ಇಲ್ಲಿ ಕಾಣಬಹುದು. ಇದೆ ರೀತಿಯ ಈ ಸಂಕಲನದ ಇನ್ನೊಂದು ಕತೆ 'ಸವತಿ', ಮಕ್ಕಳಿರದ, ಲೈಂಗಿಕತೆಯಲ್ಲಿ ತೃಪ್ತಿಪಡದ ರಾಧಕ್ಕ ಮೀರಳ ಮೇಲೆ ತೋರುವ ಸವತಿತನ, ಈ ಘರ್ಷಣೆ ಬಿಚ್ಚಿಕೊಂಡಿರುವ ಹಂತದಲ್ಲಿಯೇ ಮೈನೆರೆಯುವ ಪಾರ್ವತಿಯ ಭಾವನೆಗಳಲ್ಲಿ, ಆಕೆಗೆ ಶಂಕರನ ಬಗೆಗಿನ ಸವತಿತನ, ಹೀಗೆ ಈ ಕತೆ ಪ್ರತಿಯೊಬ್ಬರ ಸವತಿತನವನ್ನೂ ಎತ್ತಿ ಹಿಡಿಯುತ್ತದೆ.

'ಕೊಚ್ಚೇಕು ಕಣೆ, ಅಪ್ಪ ಸತ್ತ ಮೇಲೆ ಅಲ್ಲಿ ಒಂಚೂರು ಗರಿಕೆ ಬೆಳೆದಿಲ್ಲ. ಮೀರಾ ಜೊತೆ ಒಂದೆರಡು ದಿನ ಆರಾಮಾಗಿ ಇರ್ಬೇಕು, ಅದಕ್ಕೆ ಕಾಯಿಲೆ ಬೇರೆ., ಥೂ ತಾನೇ ಮಾಡ್ಕೊಂಡಿದ್ನು, ಹೆಂಗಸು ಹೆರೋಕೆ, ಕೊಳು ಕುಚ್ಕೋಕೆ ಅಂತ ತಿಳ್ಕೊಂಡಿದಾನೆ, ಫೂಲ್...(ಪು.83)

ಇಲ್ಲಿಯ ಸಂಕೇತಗಳು ಹೆಣ್ಣಿನ ಪ್ರಜ್ಞೆಯಿಂದ ಕತೆಯಲ್ಲಿ ಮೂಡಿದ ಸಂಕೇತಗಳಾದರೂ, ಹೆಂಗಸಿನ ಮೂಲಕ ಗಂಡಸಿನ ಸಂಕೇತಗಳನ್ನು, ಗಂಡಿನ ಸಂದೇಶಗಳನ್ನು ಹೇಳಿಸಿರುವುದನ್ನು ಇಲ್ಲಿ ಗಮನಿಸಬಹುದು. ರಾಧಕ್ಕನ ಗಂಡ ಗಟ್ಟಿಗ ಅಲ್ಲ ಎನ್ನುವುದು ಕತೆಯ ವಿವರದಲ್ಲಿ ಸಿಗುವ ಅಂಶ. ಇಲ್ಲಿ ರಾಧಕ್ಕನೇ 'ವೀರ್ಯತ್ವ'ಕ್ಕೆ ಸಾಂಕೇತಿಕವಾಗಿ ಬರುತ್ತಾಳೆ. ಆಕೆಯದು ಆಬ್ಜೆಕ್ಟ್ ಆಗುವ ಬಯಕೆ ಅಲ್ಲ ಈಕೆಯ ವ್ಯಕ್ತಿತ್ವದಲ್ಲಿ 'ಪುರುಷತ್ವ'-ದ ಅಂಶಗಳು ಹೆಚ್ಚು ಕಂಡುಬರುತ್ತವೆ. ಆದರೆ ಈಕೆಯ ಗ್ರಹಿಕೆ ಪುರುಷನ ಅಭಿವ್ಯಕ್ತಿಯನ್ನೇ ಮಾಧ್ಯಮವಾಗಿಸಿ ಕೊಳ್ಳುತ್ತದೆ 'ಕೊಚ್ಚೇಕು ಕಣೆ' ಎಂಬಲ್ಲಿ ಇದನ್ನು ಗಮನಿಸಬಹುದು.

ಈ ರಾಧಕ್ಕ ಶಂಕರನ ಜೊತೆ ಸಂಬಂಧ ಇಟ್ಟುಕೊಳ್ಳುವುದನ್ನು ಪ್ರತ್ಯಕ್ಷದರ್ಶಿಯಾಗಿ ಕಾಣುವ ಪಾರ್ವತಿ-ಆಕೆಯ ಮೈ ನೆರೆತಾಗಿನ ಭಾವನೆಗಳು ಈ ಸಂಸ್ಕೃತಿಯಲ್ಲಿ, ಸಹಜ ಅಭಿವ್ಯಕ್ತಿಗೆ ಅವಕಾಶವಿರದ ಸಂದರ್ಭದಲ್ಲಿ ಎಲ್ಲರಿಗೂ ಕಾಡುವ ಭಾವನೆಗಳು.

'ಸೀರೆ ಉಡುವ ಜವಾಬ್ದಾರಿ ನನ್ನನ್ನು ತಿನ್ನುತ್ತಿತ್ತು. ಎಷ್ಟು ಕೆಟ್ಟ ಜನ. ಏನಾದರೂ ತಂದೊಡ್ಡುತ್ತಾರೆ. ತಾನೇ ಶಂಕರ ಆಗಬಾರದಿತ್ತೆ ? ಇವರನ್ನೆಲ್ಲ ಬಿಟ್ಟು, ಮನಸ್ಸು ಬಂದಲ್ಲಿಗೆ ಹೋಗಿ ನರಳುವಂತೆ ಮಾಡಬಹುದಿತ್ತು. (ಪು. 87)

ಪುರುಷನಿಗೆ ಸವಾಲಾಗಿ ನಿಲ್ಲಬೇಕೆನ್ನುವ, ಅಥವಾ ತಾನು ಪುರುಷನಾಗಬೇಕೆನ್ನುವ ಹೆಣ್ಣಿನ ಭಾವನೆಗಳು ಹೆಣ್ತನದ ಬಗ್ಗೆ ಕೀಳರಿಮೆಯಿಂದ ಹುಟ್ಟುವಂತಹವುಗಳಲ್ಲ. ಒಂದು ಸಾಮಾಜಿಕ ಸಾಂಸ್ಕೃತಿಕ ಸಂದರ್ಭದಲ್ಲಿ ಪುರುಷನಿಗಿರುವ ಸವಲತ್ತುಗಳ ಬಗೆಗಿನ ಅಸೂಯೆಗಳಿಂದ ಹುಟ್ಟುವಂತಹವುಗಳು. ಹಾಗಾಗಿಯೇ ಋತುಮತಿಯಾದ ಘಟ್ಟದಲ್ಲಿ ಪ್ರತಿಯೊಬ್ಬ 'ಹೆಣ್ಣಿಗೂ ತಾನು ಗಂಡಾಗಿದ್ದರೆ ಚೆನ್ನಾಗಿತ್ತು', ಎಂಬ ಭಾವನೆ ಸುಳಿದೇ ತೀರುತ್ತದೆ.

ಈ ಸಂಕಲನದ ಹತ್ತು ಕಥೆಗಳು ಹೆಣ್ಣಿನ ಪಾತ್ರದ ಚಿತ್ರಣವನ್ನು ಅನಂತಮೂರ್ತಿಯವರ ಕಥೆಗಳ ರೀತಿ ಸಮೀಕರಣಗೊಳಿಸುವುದಿಲ್ಲ. ಹಾಗೆಂದು ಈ ಸಾಂಸ್ಕೃತಿಕ ವಿಷನ್‌ನಿಂದ ಬೇರೆಯಾಗಿ ನಿಂತ ಹೆಣ್ಣಿನ ಪೊಟೆನ್‌ಷಿಯಾಲಿಟಿಗಳನ್ನೂ ಗುರುತಿಸುವುದಿಲ್ಲ. ಕ್ರಿಯೆ, ಸಂದೇಶ ಎಲ್ಲವೂ ಸಹ ಸಾಹಿತಿಯಲ್ಲಿ ತಳಕು ಹಾಕಿಕೊಂಡಿರುವ ಪಿತೃಪ್ರಧಾನ ಮೌಲ್ಯಗಳಿಂದ ರೂಪಿತಗೊಂಡವುಗಳೇ ಆಗಿವೆ.

* * *

'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ' ಕಥಾ ಸಂಕಲನದ ಹೆಣ್ಣು ಪಾತ್ರಗಳು ಮೇಲಿನ ಕಥಾಸಂಕಲನಕ್ಕಿಂತ ಬೇರೆಯೇನಾಗಿಲ್ಲ. 'ಜೊತೆಗಾರ' ಕತೆಯ ನಾಯಕರ ಹೆಂಡತಿ ಸೀತಮ್ಮ ನಿರ್ಲಿಪ್ತ ಹೆಂಗಸು. ಸ್ಟೀಫನ್, ನಾಯಕ್, ಪಾದ್ರಿ ಎಲ್ಲರ ಕೈ ಗೊಂಬೆಯಾಗಿರುವ ಜೋಸೆಫಿನ್, ಇಡೀ ಕತೆಯಲ್ಲಿ ಕಥಾನಾಯಕ ಸೀತಾರಾಮು ನಾಯಕರನ್ನು ಅರ್ಥ ಮಾಡಿಕೊಳ್ಳುವ ಹಂತದಲ್ಲಿ ಪಾತ್ರ ಬಿಚ್ಚಿಕೊಳ್ಳುವುದರಿಂದ, ಕತೆಯೊಳಗಿನ ನಾಯಕನಿಗೆ ಬೊಂಬೆಯಾಗುವಷ್ಟು ಮಾತ್ರ ಆಕೆ ಚಿತ್ರಿತಳಾಗಿದ್ದಾಳೆ. ಜೋಸೆಫಿನ್‌ಳ ಭಾವನೆಗಳು, ದುರಂತ, ದುಮ್ಮಾನಗಳು ಕತೆಯಲ್ಲಿ ಎಲ್ಲಿಯೂ ಒಡಮೂಡದಿದ್ದರೂ ಕತೆಯ ಕೊನೆಯ ಭಾಗ ಮಾತ್ರ ಅದನ್ನು ಹೇಳುತ್ತದೆ. 'ಜೋಸೆಫಿನ್‌ಳ ಭಾವನೆಯನ್ನೆಲ್ಲ ಮಂಡಿಸಿದರೆ ದುರಂತ, ದುಮ್ಮಾನಗಳನ್ನೊಳಗೊಂಡ ಆಳವಾದೀತು ಎನ್ನಿಸಿತು. (ಪು. 125)

ವಾಸ್ತವ ಜೀವನ ಪ್ರಕ್ರಿಯೆಯಲ್ಲಿ ಗೊಂಬೆಗಳಾಗುವಂತೆ, ಒಂದು ಸಂಸ್ಕೃತಿಯ ಸಾಹಿತ್ಯದಲ್ಲಿ ಇವರು ಸಂಕೇತ, ಬೊಂಬೆಗಳಾಗುತ್ತಾರೆ.

'ಮಾರಲಾಗದ ನೆಲ'ದ ನಾಯಕ ವಿಶ್ವನ ಹೆಂಡತಿ ಕುಸುಮ ಮಾಮೂಲಿ ವ್ಯಾವಹಾರಿಕ ಹೆಂಗಸು. ನೆಲ ಮಾರಬೇಕೆಂದು ಹಳ್ಳಿಗೆ ಬರುವ ವಿಶ್ವ, ಅಲ್ಲಿ ಕುರಿ ಕಡಿ

ಯುವುದನ್ನು ನಿರೀಕ್ಷಿಸುತ್ತಾ, ನಿಂತಾಗ ಕಾಣುವ ಸಾವಿತ್ರಿಯನ್ನು ಹೀಗೆ ವರ್ಣಿಸುತ್ತಾನೆ, '......ಎಲ್ಲರಿಗಿಂತ ಕೊಂಚ ಎತ್ತರವಾಗಿದ್ದಳು. ಬಿಗಿದ ಎದೆ ಸೀರೆಯ ಮೇಲೆ ಕೋಡಿ ಹಾಯುತ್ತಿತ್ತು. ಮತ್ತೆ ಕೆಳಕ್ಕೆ ನೋಡಿದೆ. ಬಿಗಿಯಾದ ಗಂಡುಗಳನ್ನು ಬಯಸುವ ಸೊಂಟ. ಅಲ್ಲಿಂದ ಕೆಳಕ್ಕೆ ಉಬ್ಬಿದ, ಕಣ್ಣು ಕುಕ್ಕುವ ತೊಡೆ, ಕೊಂಚ ಕಪ್ಪಾದ, ಕಾದ ಉಕ್ಕಿನಂತಹ ಹೆಣ್ಣು'. (ಪು. 36) ಒಂದು ಸಂಸ್ಕೃತಿಯ ದುರಂತ ಇದು. ಯಾವುದೇ ಹೆಣ್ಣು ಎದುರಿಗೆ ನಿಂತಾಗ ಸಂವಾದ ದೈಹಿಕವಾದದ್ದಾಗಿ ಬಿಡುತ್ತದೆ. ಸೊಂಟ, ತೊಡೆ, ಎದೆಯ ಈ ರೀತಿಯ ವರ್ಣನೆಗಳು ಲಂಕೇಶ್ ಹಾಗೂ ಅನಂತಮೂರ್ತಿಯವರ ಸಾಹಿತ್ಯದಲ್ಲಿ ಅಪಾರವಾಗಿ ಸಿಗುತ್ತವೆ. ಜೀವನ ಶೋಧನೆಯ ಮೂಲ ಇಲ್ಲಿ ಲೈಂಗಿಕತೆಯಾಗುವಾಗ ಅದು ಪುರುಷನ ಮಾನಸಿಕ ಸಿದ್ಧತೆಯ ಲೈಂಗಿಕತೆಯಾಗುವುದರಿಂದ ಅದು ಹೆಚ್ಚಿನ ಮಟ್ಟ ದೈಹಿಕದ್ದಾಗಿ ಬಿಡುತ್ತದೆ. ದೇಹದ ಭೂಮಿ. ಹೆಣ್ಣು, ವಶಪಡಿಸಿಕೊಳ್ಳೋದು ಈ ರೀತಿಯ ಸಂಕೇತಗಳು, ಹೆಣ್ಣಿನ ವಾಸ್ತವ ಬದುಕನ್ನು ಪ್ರತಿನಿಧಿಸುತ್ತವೆ.

'ಕಣ್ಣು ಅವಳ ಮೈಮೇಲೆ ನೆಟ್ಟಿದ್ದವು. ನವುರಾಗಿ, ಗಟ್ಟಿಯಾಗಿ, ಜೀವತುಂಬಿ ಏರಿಳಿದಿದ್ದ ಶರೀರ ಹಾಸಿಕೊಂಡಿದ್ದ ಸೀರೆ ಎಳೆದುಕೊಂಡು ತೊಡೆ, ಎದೆ ಮುಚ್ಚಿಕೊಂಡಳು. ನಾನು ಹುಚ್ಚನಂತೆ, ವೈದ್ಯನಂತೆ ನೋಡಿದೆ. ......ತುಂಬಿ ಉಚಾಯಿಸಿದ ಮೊಲೆಗಳು. ಅವುಗಳಿಂದ ಸಾಫಾಗಿ ಮೇಲಕ್ಕೆದ್ದು, ಮೊನಚಾದ, ನಸುಗೆಂಪಾಗಿ ಹಿಗ್ಗಿಸುವ ತೊಟ್ಟುಗಳು, ಸೀರೆಯ ಮೂಲಕ ಕೆಳಕಾಣುವ ಆರೋಗ್ಯದ ನಡು, ಹೊಕ್ಕಳು. ಮೊಲೆಗಳ ನಡುವಿನಿಂದ ನವಿರಾಗಿ ಹೊರಟು ಹೊಕ್ಕಳದ ಕೆಳಕ್ಕೆ ಕಪ್ಪಾಗಿ ಸಾಗಿದ ಕೂದಲು.........ನೋಡು ಸಾವಂತ್ರಿ ನಾನಿದೇನೆ, ಹೆದರ್ಕೋಬೇಡ...ಬಾ ಇಲ್ಲಿ, ಕುಪ್ಪಸದ ಗುಂಡಿ ಹಾಕ್ತೀನಿ ......ಇದರಿಂದ ಏನಾಗುತ್ತೆ ಅಂತ ನಿನಗೆ ಗೊತ್ತಿಲ್ಲ

ದೇಹ-ಮನಸ್ಸು ಹೀಗೆ ಇವೆರೆಡರ ಸ್ವಾತಂತ್ರ್ಯವನ್ನು ಗುರುತಿಸುವ ಹಂತದಲ್ಲಿ ರಚಿತವಾದ ಲಂಕೇಶರ ಬರಹಗಳಲ್ಲಿ ನಾಯಕರು ದೇಹ ಸ್ವಾತಂತ್ರ್ಯದ ಅಭಿವ್ಯಕ್ತಿಯ ಪ್ರತಿಪಾದನೆಯಿಂದ ಹೆಂಗಸರನ್ನು ಬಳಸಿಕೊಳ್ಳುತ್ತಾರೆ. ಹೀಗೆ "ಬಲಿಪಶು"ಗಳಾಗುವಂತಹ ಹೆಣ್ಣುಗಳ ಮನಸ್ಥಿತಿಗೆ ಆ ಅಭಿವ್ಯಕ್ತಿಯೇ ಸ್ವಾತಂತ್ರ್ಯದ ಕಲ್ಪನೆಯೇ ? ದೇಹ-ಮನಸ್ಸು ಬಿಡಿ ಬಿಡಿಯಾಗಿ ನೋಡುವ ಇವರ ಕಲ್ಪನೆಯ ರೂಪಗಳು 'ಸ್ತ್ರೀ-ಸಂವೇದನೆ'ಗೆ ಹತ್ತಿರದ ರೂಪಗಳೇ ?

ಪ್ರತ್ಯೇಕ ಅಂಗವಾಗಿರುವ, ಆಟವಾಡಬಲ್ಲ 'ಶಿಶ್ನ'ದ ರಚನೆಯೂ ಇದಕ್ಕೆ ಕಾರಣವಿರಬಹುದು. ಈ ಲೈಂಗಿಕತೆ ಗಂಡು ಭಾಷೆಯ ದೈಹಿಕ ರಚನೆಯ ಅಭಿವ್ಯಕ್ತಿ. ಹಾಗಾಗಿ ಇಲ್ಲಿ ಅಭಿವ್ಯಕ್ತಿಗೊಳ್ಳುವ ಹೆಣ್ಣುಗಳು ಕೇವಲ ಆಬ್ಜೆಕ್ಟ್ ಆಗಿಬಿಡುತ್ತಾರೆ. 'ಸಾವಂತ್ರಿ'ಯನ್ನು ವಿಶ್ವ ಅಸಹಜವಾಗಿ ಮಾತನಾಡಿಸುವ ರೀತಿಯಲ್ಲಿ, ದೇಹದ ಪ್ರತ್ಯೇಕ ಅಸ್ತಿತ್ವವನ್ನೂ, ಅರಿವನ್ನೂ. 'ಶಿಶ್ನ ಪ್ರಜ್ಞೆ'ಯ ಹಿರಿತನವನ್ನೂ ಎತ್ತಿಹಿಡಿಯುವುದನ್ನು ಕಾಣಬಹುದು. 'ಸಾವಂತ್ರಿ ಕಾಣಿಸಿಕೊಳ್ಳುವ ಕತೆಯ ಭಾಗಗಳಲ್ಲೆಲ್ಲಾ; ನಾಯಕ ವಿಶ್ವನಿಗೆ ಅವಳ ಸೊಂಟ, ಹೆಣ್ತನಗಳೇ ಕಾಣಿಸುವುದು. ಸಂಕೇತಗಳು ಶಿಶ್ನ ಪ್ರಜ್ಞೆಯನ್ನು ಎತ್ತಿ ಹಿಡಿಯುವಂತಹವುಗಳೇ.

'ರಾತ್ರಿ ಕಗ್ಗತ್ತಲಿನಲ್ಲಿ ಭೂಮಿಯನ್ನು ವಶಪಡಿಸಿಕೊಳ್ಳಬೇಕು. ನಾನು ಕವಿಯಲ್ಲ. ಆದರೆ ಬಯಲಾಟದ ರಂಡೆ ಶಾಂತಿ ಕಲಿಸಿದ ಪಾಠ ಅದು. (ಪು. ) ಸಾವಂತ್ರಿ, ಮಾದೇವಣ್ಣನ ಮಗ, ಹೀಗ್ಮಾಡಿದ ಅಂದ್ರೆ ದೊಡ್ಡ ಪಂಚಾಯಿತಿ, ಜಗಳ ಆಗುತ್ತೆ, ಗೊತ್ತಾಯ್ತಾ. ಪರಿಸ್ಥಿತಿ ಹದಗೆಡುತ್ತೆ ಅಂತ ಏನೇನೋ ಬಡಬಡಿಸಿದೆ. ಕೈ ಮಾತ್ರ ಗುಂಡಿ ಹಾಕಲು ನಿರಾಕರಿಸಿದವು. ಅವಳ ಬಗ್ಗೆ ಅನುಕಂಪ ಬಂದಿತ್ತು. ನನ್ನೂರ ಮುಗ್ಧೆ, ಹರೆಯ ತುಂಬಿ ಕಣ್ಣು ಮಬ್ಬಾದ ಗಳಿಗೆಯಲ್ಲಿ, ಗಂಡಸಿನ ಹಿಡಿತಕ್ಕೆ ಸಿಕ್ಕಿ, ನರಳಿ ತೊಡೆಗಳಲ್ಲಿ ಭಯ, ಆನಂದ, ಹಿಂಸೆ ಪಡೆದ ಮುಗ್ಧೆ, ತತ್ತರಿಸಿ ಹೋಗಿ ದಿಕ್ಕೂ ಕಾಣದ ಮುಗ್ಧೆ...... ಗುಂಡಿ ಹಾಕಲು ಹಿಂಜರಿದ ನನ್ನ ಕೈ ಮೆಲ್ಲಗೆ ಬೆನ್ನನ್ನು ನೇವರಿಸಿದವು. ಹಾಗೆಯೇ ಸೂಕ್ಷ್ಮವಾಗಿ ನನ್ನ ಸೊಗಸು ಮಾತುಗಳೊಡನೆ ನನ್ನ ಹಸ್ತ ಅವಳ ಎದೆಯತ್ತ ಜಾರಿದವು ಮೊಲೆಗಳನ್ನು ಸವರುತ್ತ ತೊಟ್ಟುಗಳನ್ನು ಮೆತ್ತಗೆ ಚಿವುಟಿದವು. ಅವಳು ಅಳುತ್ತಿದ್ದಳು. ಸೆರಗು ನೆಲಕ್ಕೆ ಬಿದ್ದ ನೆದರಿರಲಿಲ್ಲ. 'ನೀನು ತುಂಬಾ ಒಳ್ಳೆಯ ಹುಡುಗಿ ಸಾವಂತ್ರಿ, ಅಳಬಾರ್ದು. ಬೆಂಗಳೂರಿಗೆ ಬರ್ತೀಯಲ್ಲವಾ.

ತುಂಬಾ ಮಜಾ ಇರುತ್ತೆ ಗೊತ್ತಾ...ತುಂಬಾ ಜೋರಾಗಿರುತ್ತೆ......'

....ವಿಸ್ವಣ್ಣ, ವಿಸ್ವಣ್ಣ ಅಂತ ಬಿಕ್ಕುತ್ತಿದ್ದಳು. ನೀನು ನನ್ನ ಅಂಗಿ ಥರ ಸಾವಿತ್ರೀ, ನನ್ನ ಊರು ಜ್ಞಾಪಿಸಿಕೊಂಡಾಗಲೆಲ್ಲ ನನಗೆ ನಿನ್ನದೇ ನೆನಪು ಗೊತ್ತಾ : ತೊಡೆಗೆ ತೊಡೆ ಸೇರಿಸಿ, ಕೆನ್ನೆಯನ್ನು ಅವಳ ಕೆನ್ನೆಯ ಹತ್ತಿರಕ್ಕೆ ಒಯ್ದೆ. ಬಿಸಿಯುಸಿರು ಮೈ ನಡುಗಿಸಿತು. ಅಲ್ಲಿಯವರೆಗೆ ಅವಳ ಧೋರಣೆಯ ವಿಚಾರವಾಗಿ ಅನುಮಾನವಿತ್ತು. ಈಗ ತುಟಿಯ ಮೇಲೆ ಮುತ್ತಿಟ್ಟೆ ಅವಳು ಸುಮ್ಮನಿದ್ದಳು. ಕುತ್ತಿಗೆಯನ್ನು ಅಪ್ಪಿ ತುಟಿಯಿಂದ ನೇವರಿಸಿದೆ. ಮೊಲೆಗಳ ನಡುವೆ ಮುಖ ಇಟ್ಟು ಕ್ರಮೇಣ ಹೊಕ್ಕಳು, ಮೃದುವಾಗಿ ಕಿಬ್ಬೊಟ್ಟೆ, ತೊಡೆಗಳ ಮೇಲೆ ಕೆನ್ನೆ ಸವರಿದೆ...ದೇಹದುದ್ದಕ್ಕೂ ಮಲಗಿದೆ...ಕುಕ್ಕರಗಾಲಲ್ಲಿ ಕೂತೆ....'

ಒಂದು ಸಂಸ್ಕೃತಿಯ ಲೈಂಗಿಕ ರಾಜಕೀಯದ ಪರಿಪೂರ್ಣ ಚಿತ್ರ ಇದು. ಮುಗ್ಧತೆಯ ಮೇಲೆ ಜ್ಞಾನದ ಅಧಿಕಾರ, ಭಯದ ಮೇಲೆ ರಕ್ಷಣೆಯ ಅಧಿಕಾರ, ಭೂಮಿಯ ಮೇಲೆ ಒಡೆಯನ ಅಧಿಕಾರ, ಯೋನಿಯ ಮೇಲೆ ಶಿಶ್ನದ ಅಧಿಕಾರ...ಹೀಗೆ ವೈಯಕ್ತಿಕ ಸಂಬಂಧದಲ್ಲಿ ರಾಜಕೀಯವಾಗುವ ಎಲ್ಲಾ ವಿಚಾರಗಳೂ ಇಲ್ಲಿ ಸಂಪೂರ್ಣವಾಗಿ 'ಚಿತ್ರಿತಗೊಂಡಿವೆ. 'ಶಿಶ್ನ ಉದ್ರೇಕ' ಇಲ್ಲಿ ಕೇವಲ ದೈಹಿಕ ರಚನೆಯ ಸ್ಪಂಧನ ಮಾತ್ರವೇ ಅಲ್ಲ ಎಂಬುದನ್ನು ಇಲ್ಲಿನ ವಿವರಗಳಲ್ಲಿ ಗಮನಿಸಬಹುದು. ಒಬ್ಬನೊಡನೆ ಆಗಲೇ ಮಲಗಿದ್ದ ಬಗ್ಗೆ ಸಾವಂತ್ರಿಗಿದ್ದ ಭಯದ ಹಿನ್ನೆಲೆಯಲ್ಲಿ ವಾತಾವರಣವನ್ನು ವಿಶ್ವ ಪೂರ್ತಿ ತನ್ನ ಹಿಡಿತಕ್ಕೆ ತೆಗೆದುಕೊಳ್ಳುತ್ತಾನೆ. ಆ ಸನ್ನಿವೇಶವನ್ನು ಬಳಸಿಕೊಳ್ಳುವ ಹಂತದಲ್ಲಿಯೇ 'ಏಳವ್ವ ಸಾವಂತ್ರೀ, ಅನ್ಯಾಯ ಆಗಿದ್ರೆ ದೇವರು ನೋಡಿಕೊಳ್ತಾನೆ,' ಎನ್ನುವ ತಂದೆ ತರಹೆಯ ಮಾತುಗಳನ್ನು ಅವಳ ಭಾಷೆಯಲ್ಲಿಯೇ ನಿರೀಶ್ವರನಾಗಿ ವಿಶ್ವ ಆಡುತ್ತಾನೆ. ಹೀಗೆ ಹೇಳುವಾಗಲೇ ಕಣ್ಣಿಗೆ ಬೀಳುವುದೆಲ್ಲವೂ ಉಬ್ಬಿಯಿಸಿದ ಮೊಲೆಗಳು, ಸೊಂಟ, etc. ಸಾರ್ವಜನಿಕ ಭಯದ ಬಗ್ಗೆ ಸಮಾಧಾನ ಮಾಡುತ್ತಲೇ ಈ ಬಗ್ಗೆ ಯಾರಿಗೂ ಹೇಳಬೇಡವೆಂದು, ರಾಜಕೀಯ ಮಾಡುತ್ತಾನೆ. ಪಿತೃ ಪ್ರಧಾನ ಸಂಸ್ಕೃತಿಯ ರಕ್ಷಣೆ ಅಧಿಕಾರಿತನ, ಶಿಶ್ನಪ್ರಜ್ಞೆ ಪ್ರತಿಯೊಂದು ಲೈಂಗಿಕ ಸಂಬಂಧದಲ್ಲಿ ಅಭಿವ್ಯಕ್ತಿ ಪಡೆದುಕೊಳ್ಳುವ ಪರಿಪೂರ್ಣ ರೀತಿ ಇದು. ನಾನು ಹುಚ್ಚನಂತೆ, ವೈದ್ಯನಂತೆ ನೋಡಿದೆ ಎನ್ನುವ ವಿಶ್ವನ ಒಟ್ಟು ಕ್ರಿಯೆಯ ಹಿಂದೆ ಮೇಲ್ಕಂಡ ವಿಚಾರಗಳನ್ನು ಸ್ಪಷ್ಟವಾಗಿ ಗಮನಿಸಬಹುದು. 'ನೀನು ನನ್ನ ತಂಗಿ ತರಾ. ನೀನು ಬೆಂಗಳೂರಿಗೆ ಬರ್ತೀಯಾ, ಮಜಾ ಇರುತ್ತೆ ಗೊತ್ತಾ' ಎನ್ನುವ ಮಾತುಗಳು ಕೇವಲ ಉದ್ರೇಕದ ಮಾತುಗಳಾಗಿದ್ದು. ಧ್ವನಿ ಶೂನ್ಯ (hollow) ವಾಗಿರುವುದನ್ನು ಗಮನಿಸಬಹುದು. ಅಲ್ಲಿಯವರೆಗೆ ಅವಳ ಧೋರಣೆಯ ಬಗ್ಗೆ ಅನುಮಾನವಿತ್ತು ; ಈಗ ತುಟಿ ಮೇಲೆ ಮುತ್ತಿಟ್ಟೆ. ಅವಳು ಸುಮ್ಮನಿದ್ದಳು.' ಪುರುಷನ ತೀವ್ರ ಲೈಂಗಿಕ ಅನುಭವ ಅಭಿವ್ಯಕ್ತಿ ಪಡೆದಿರುವ ರೀತಿ ಇದು. ಈ ರೀತಿಯ ಅಭಿವ್ಯಕ್ತಿಗಳೇ ಲೈಂಗಿಕ ಸಂಬಂಧದ ವೀರ್ಯತ್ವವನ್ನು ಎತ್ತಿ ಹಿಡಿಯುವ ಅಭಿವ್ಯಕ್ತಿಗಳಾಗಿ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ರೂಪುಗೊಂಡಿದ್ದರಿಂದಲೇ (ಫೆಮಿನೈನ್ ಸೆನ್ಸಿಬಲಿಟಿಗೆ) ಹೆಂಗಸಿನ ಅಭಿವ್ಯಕ್ತಿ ಕ್ರಮ ಕೂಡಾ ಇದೆ, ರೀತಿಯಾಗಿ ರೂಪುಗೊಂಡದ್ದು. ಈ ಲೈಂಗಿಕ ಸಂಬಂಧದ ವಿವರಗಳು ಒಂದು ರೀತಿಯ ಮಿಸ್ಟಿಕ್ ಆದ ಅನುಭವಗಳಲ್ಲ. ಕೇವಲ ದೈಹಿಕ ಅಭಿವ್ಯಕ್ತಿಗಳು ಮಾತ್ರ. ನಂತರ ಅಲ್ಲಿಗೆ ಬಂದ ರುದ್ರನಿಗೆ ಹೇಳುತ್ತಾನೆ. 'ಎಷ್ಟು ನೋಡಿದರೂ ತೃಪ್ತಿಯಾಗೋಲ್ಲ ರುದ್ರ. ಪ್ರಕೃತಿಯಲ್ಲಿ ವಿಚಿತ್ರ ಸುಖ ಇದೆ ನೋಡು.' (ಪು.60, 59, 58) ಹೀಗೆ ಹೆಣ್ಣು ಪ್ರಕೃತಿಯಾಗಿ, ಭೂಮಿಯಾಗಿ ಸಾಂಕೇತಿಕವಾಗಿ ಧ್ವನಿಸುವುದರಿಂದಲೇ, ಮನುಷ್ಯ ಜೀವಿಯಾಗಿ ರೂಪುಗೊಳ್ಳದೇ ಹೋಗುವುದು. ಈ ಸಾವಂತ್ರಿ ಲೈಂಗಿಕ ಕಾರಣದಿಂದ ಎಲ್ಲರ ವಸ್ತುವಾಗುತ್ತಾಳೆ. ಒಬ್ಬೊಬ್ಬರು ಗುದ್ದಾಡುವ ನೆಲಕ್ಕೆ ಸಂಕೇತವಾಗುತ್ತಾಳೆ. ಎಲ್ಲರ ಬೊಂಬೆಯಾಗುತ್ತಾಳೆ, ಹೀಗಿರುವಾಗ ವಿಶ್ವನಿಗೆ ಸಮಾಧಾನವಾಗುವುದು ; ಆಕೆ ಕನ್ಯತ್ವಕ್ಕಾಗಿ ಒದ್ದಾಡುವ ಹೆಣ್ಣಲ್ಲವೆಂದೂ, ಈಕೆ ಇತರರ ಯೋಜನೆಯ ಕೇಂದ್ರಯೆಂಬುದು, ಭೂಮಿಯ ಯೋಜನೆಗೆ ಸಂಕ್ರಪ್ಪ ಬಲಿಯಾದಂತೆ, ಸಾವಂತ್ರಿಯೂ ಬಲಿಯಾಗುತ್ತಾಳೆ. ಈ ಭೂಮಿ, ದುರ್ಗನ ಸಾವು, ಸಾವಂತ್ರಿಯ ಆತ್ಮಾಚಾರದ ಹಿನ್ನೆಲೆಯಲ್ಲಿಯೇ ಹೆಣ್ಣಿನ ಪ್ರಚಲಿತ ಸಮಸ್ಯೆಗಳನ್ನು ಗಮನಿಸಬಹುದು.

'ಗುತ್ತಿ ಗೀತಾ ಆದದ್ದು'– ಕತೆಯಲ್ಲಿಯೂ ಸಹ ಇದೇ ರೀತಿಯ ಸಂಕೇತಗಳನ್ನು ಗಮನಿಸಬಹುದು. ಗುತ್ತಿಯನ್ನು ಮುನಿಯ ಹೆದರಿಸಿ ಕರೆದುಕೊಂಡು ಹೋಗುವ ಹೊತ್ತಿಗೆ ಕಾನ್‌ಸ್ಟೇಬಲ್ ಚಿಕ್ಕಣ್ಣ ಕೇಳುತ್ತಾನೆ. 'ಗದ್ದೆ ಕೆಲಸ ಶುರುಮಾಡಿ ಎಷ್ಟು ದಿನ

ಆತಪ್ಪ', ಸಂದರ್ಭಕ್ಕೆ ಒಂದು ಸಂಸ್ಕೃತಿಯಲ್ಲಿ ಅರ್ಥ ವತ್ತಾದ ಮಾತಾಗಿ ಧ್ವನಿಸುತ್ತದೆ. ಹೆಣ್ಣನ್ನು ಭೂಮಿ ಯಾಗಿ, ಗದ್ದೆಯಾಗಿ, ಬೆಳೆಕೊಡುವ ಭೂಮಿಯಾಗಿ– ಇತ್ಯಾದಿ ಸಂಸ್ಕೃತಿಯಲ್ಲಿ ಹೆಣೆದುಕೊಂಡಿರುವ ಮೌಲ್ಯ ಗಳನ್ನೇ ತಳಕುಹಾಕಿಕೊಂಡಿರುವ ಈ ಲೇಖಕರ ಪ್ರಯತ್ನಗಳು, ಈ ಭಾಷೆ, ಸಂಕೇತಗಳ ಬಗ್ಗೆ ವಿಡಂಬ ನಾತ್ಮಕವಾಗಿ ಧ್ವನಿಸುವುದಿಲ್ಲ. ರಾಜಕೀಯದ ವ್ಯವಹಾರ ಗಳಿಗೆ ಹೆಣ್ಣು ಬಲಿಯಾಗುವ ರೀತಿಯನ್ನು ಈ ಕತೆ ತೀರಾ ಕಳಪೆಯಾಗಿ, ಸಪ್ಪೆಯಾಗಿ ಹೇಳುತ್ತದೆ.

'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'–ಇದಕ್ಕಿಂತ ಭಿನ್ನವಾಗಿರುವ ಪಾತ್ರಗಳನ್ನೇನೂ ಸೃಷ್ಟಿಸುವುದಿಲ್ಲ. ಆದರೆ ಹಳ್ಳಿಯ ಹೆಂಗಸರ ಗಟ್ಟಿತನವನ್ನು ಇಲ್ಲಿಯ ತಾಯಿ, ನಿಂಗಿ ಸೂಚಿಸುತ್ತಾರೆ. 'ನೀ ಮುಚ್ಕೊಂಡಿರೋ ಗೌಡ......'ನೀ ಬ್ಯಾರೆ ಬುದ್ದಿ ಹೇಳೋಕೆ ಬಂದ್ಯಾ ? ನಿನ್ನ ಮೂತಿಗೆ ಮಂಗ್ಳಾರ್ತಿ ಎತ್ತ, ಹೆತ್ತು ಸಾಕಿದ್ದಕ್ಕೆ ಕೊಟ್ಟೆಲ್ಲ ಗೆಣನಾಯ್ಕ ಹಿಂದಕ್ಕೆ !'...ಭಾಷೆಯ ಸಾಧ್ಯತೆಗೆ ಬಂದಾಗ ಹಳ್ಳಿಯ ಹೆಂಗಸಿನ ಭಾಷೆಯ

> ಲೈಂಗಿಕ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ಹೆಣ್ಣಿನ ಸ್ವಾತಂತ್ರ್ಯದ ಪರಮಾವಧಿಯನ್ನು ಗುರುತಿಸಿದ ಈ ಲೇಖಕರು ಲೈಂಗಿಕ ಅಭಿ ವ್ಯಕ್ತಿಯಲ್ಲಿ ರೂಪಿಸಿದ ಸ್ವರೂಪ ನಿಜವಾದ ಸ್ತ್ರೀ–ಸಂವೇದನೆಯ ಸ್ವರೂಪವೇ ?

ಶ್ರೀಮಂತಿಕೆಯನ್ನು ಲಂಕೇಶರ ಬರವಣಿಗೆಯಲ್ಲಿ ಕಾಣ ಬಹುದು. ಆರ್ಥಿಕ ಅಸಹಾಯಕತೆಯಲ್ಲಿ ಲಿಂಗೇಗೌಡರ ಹಂಚಿಕೆಗೆ ತಾಯಿ, ಅಕ್ಕ ನಿಂಗಿ ಬಲಿಯಾಗುವ ಹಿನ್ನೆಲೆ ಯಲ್ಲಿ ಕತೆ ಓಡುತ್ತದೆ.

* * *

ನಾಟಕಗಳಿಗೆ ಬಂದಾಗ ಲಂಕೇಶರ 'ನನ್ನ ತಂಗಿ ಗೊಂದು ಗಂಡು ಕೊಡಿ' ಜೀವನದ ಹೆಚ್ಚು ಸಂಕೀರ್ಣತೆ ಒಳಗೊಂಡಿರುವ ಉತ್ತಮ ನಾಟಕವಲ್ಲವಾದರೂ, ಇಂದು ಫೆಮಿನಿಸಂ ಎತ್ತುತ್ತಿರುವ ಪ್ರಶ್ನೆಗಳನ್ನು ಗಂಭೀರವಾಗಿ ಎತ್ತುತ್ತದೆ. ಅಣ್ಣನ ದ್ವೇಷಕ್ಕೆ, ತಂದೆಯ ಅಧಿಕಾರಕ್ಕೆ, ರಾಮಣ್ಣನವರ ಆಸೆಬುರುಕ–ಹೀಗೆ ಎಲ್ಲರಿಗೆ ಕೈಗೊಂಬೆ ಯಾಗುವ ತಾಯಿಯ ಮೌನರೋಧನಕ್ಕೆ, ಒಳ ಆಸೆ ಗಳಿಗೆ ಸೆಟೆದು ನಿಲ್ಲುವ ಕಮಲ ಹಾಗೂ ಆಕೆಯ ತಾಯಿಯ ಅನೇಕ ಪ್ರಶ್ನೆಗಳನ್ನು ಈ ನಾಟಕ ಎತ್ತುತ್ತದೆ ತಂದೆ, ಅಣ್ಣ, ರಾಮಣ್ಣನವರ ಮಧ್ಯೆ ಕಮಲ ತಾಯಿಯ ಮೌನ ಸಂಸ್ಕೃತಿಗೆ ಧ್ವನಿ ಕೊಡಲು ಪ್ರಯತ್ನಿ ಸುತ್ತಾಳೆ. (ಹೀಗೆ ತಂದೆ/ಅಣ್ಣ/ತಾಯಿ/ ತಂಗಿ, ಈ ರೀತಿಯ ರಕ್ತ ಸಂಬಂಧಗಳಲ್ಲೇ ನಮ್ಮ ವ್ಯಕ್ತಿತ್ವಗಳನ್ನು ಬೆಳೆಸಿಕೊಳ್ಳುವ ಸಂಬಂಧಗಳನ್ನು ಉಳಿಸಿ ಫೆಮಿನಿಸಂ ತಲೆಯೆತ್ತಬೇಕಾಗಿರುವುದು, ಸ್ತ್ರೀ ಪ್ರಜ್ಞೆಯನ್ನು ಪ್ರತಿ ಪಾದನೆ ಮಾಡಿಕೊಳ್ಳಬೇಕಾಗಿರುವುದು ಅಗತ್ಯವಾದ್ದ ರಿಂದ, ಎಲ್ಲಾ ಚಳುವಳಿಗಿಂತ ಇದು ಅತ್ಯಂತ ನೋವಿನ ಚಳುವಳಿ ಎನಿಸಿಕೊಂಡಿದೆ) ತಂದೆ ಊರೂರು ಅಲೆಯು ವಲ್ಲಿ, ತಾಯಿ ಹಾಗೂ ರಾಮಣ್ಣನವರ ಮಧ್ಯದ ಸೌಹಾರ್ದ ಸಂಬಂಧದ ಬಗ್ಗೆ ಜಗನಾಥ ಚುಚ್ಚಿ ಆಡು ತ್ತಾನೆ ಆಗ ಕಮಲ ಹೇಳುತ್ತಾಳೆ.

'ಇವತ್ತಿನವರೆಗೆ ನಾನು ನಿನ್ನ ಮುದ್ದಿನ ಗಿಳಿ ಆಗಿದ್ದೆ. ನಿನ್ನ ಆಟದ ಜೋಕರ್ ಆಗಿದ್ದೆ. ಇನ್ನು ಶುರುವಾಗುತ್ತೆ ಹೊಸ ಅಧ್ಯಾಯ. ನನ್ನಮ್ಮ ಇಲ್ಲಿಯವರೆಗೆ ಪಟ್ಟಪಾಡು ಸಾಕು. ಮಾತಾಡೋಕೊಬ್ಬ ಗಂಡಸಿಲ್ದೆ, ದುಃಖ ಹೇಳಿಕೊಳ್ಳೋಕೊಂದು ಜೀವವಿಲ್ದೆ, ರಾಮಣ್ಣನ ಹತ್ರ ಮಾತಾಡಿದ್ರೆ ಕೇಳೋಕೆ ನಾನುಯಾರು ? ನೀನು ಯಾರು ? ಹೆಂಗಸರ ಕಷ್ಟ ಹೆಂಗಸರಿಗೆ ಗೊತ್ತು. ಗಂಡ್ಸು ಆಕೆಗೆ ಗೆಳೆಯನಾಗಿ ಬೇಕಾಗಬಹುದು. ಗಂಡ ನಾಗಿ ಬೇಕಾಗಬಹುದು. ಬರೀ ಹರಟೆಗೆ ಬೇಕಾಗ ಬಹುದು. ಅದನ್ನ ಕೇಳೋಕೆ ನೀನ್ಯಾವ ಪುರುಷ ? ನೀನು ಕಟ್ಟಿದ ಸಂದೇಹದ ಚಟ್ಟದಲ್ಲಿ ಬೆಂದೂ ಬೆಂದೂ ಬೂದಿಯಾಗಿದ್ದೇನೆ' (ಪು. 50)

ತಾಯಿಯ ರೋಧನಕ್ಕೆ ಅಭಿವ್ಯಕ್ತಿಯಾಗುವ ಕಮಲ ವ್ಯಕ್ತಿಯಾಗಿ ಮೈ ಚಾಚುತ್ತಾಳೆ. ತಂದೆ/ ತಾಯಿ/ ಅಣ್ಣಂದಿರ ಪ್ರಜ್ಞಾವಲಯ ಮೀರಿ ತನ್ನದೇ ಆದ ಪ್ರಜ್ಞಾವಲಯದಲ್ಲಿ ನಿಲ್ಲುತ್ತಾಳೆ. ತಾಯಿಯ ಒಂಟಿ ಕನಸಿನ ಮೂಲಕ ತನ್ನ ವ್ಯಕ್ತಿತ್ವದ ಪ್ರತಿಬಿಂಬವನ್ನು ಬದಲಾಯಿಸಲು ಪ್ರಯತ್ನಿಸುತ್ತಾಳೆ. ನಿನಗೆ ಸತ್ಯ ತೋರಿಸಿದೆ ಎನ್ನುವ ಅಣ್ಣನಿಗೆ ಅಪ್ಪ ಸತ್ತ ಸಂದರ್ಭದಲ್ಲಿ ಹೇಳುತ್ತಾಳೆ.

"ಸತ್ಯ, ಸತ್ಯ, ಸತ್ಯ.–ಜಗತ್ತಿನ ಕೋಟಿ ಕೋಟಿ ತತ್ತ್ವಜ್ಞಾನಿಗಳು ಹುಡುಕೀ ಹುಡುಕೀ ಸಿಕ್ಕದೇ ಮಣ್ಣಲ್ಲಿ ಮಣ್ಣಾಗಿ ಹೋದಮೇಲೆ ನೀನು ಹೊಸದಾಗಿ ಸತ್ಯಾ ಹುಡುಕ್ತೀಯಾ ಸತ್ಯಾನ ? ನಿನ್ನ ಮಾತು ನಂಬೋಕೆ ನಾನೇನು ಚಿಕ್ಕ ಹಿಳ್ಳೆ ಅಲ್ಲ. ಬದುಕಿನ ಕೊಳಕನ್ನೆಲ್ಲ ನನ್ನ

ಎದೇಲಿ ಹಾಕಿ, ಅಪ್ಪನ ಠಕ್ಕನ್ನೆಲ್ಲ ನನಗೆ ಇಕ್ಕಿ, ನನ್ನ ಸುತ್ತ ಸಂಶಯದ ಚಕ್ರವ್ಯೂಹ ಕಟ್ಟಿ ನನ್ನನ್ನು ನಿರುಪಯುಕ್ತ ಕ್ರಿಮಿ ಮಾಡಿದೆ. ಅಣ್ಣ, ಜ್ಞಾನದ ಬೆಲೆ ಇಷ್ಟೇನೇ ಅನ್ನಿಸ್ತಾ ಇದೆ. ತಂದೆ ಅನ್ನೋ ಸುಂದರ ಭ್ರಮೇನಾ, ತಾಯಿ ಅನ್ನೋ ಅಂಶವನ್ನೇ, ಅಣ್ಣ ಅನ್ನೋ ಸಂಬಂಧಾನ ಕತ್ತರಿಸಿ ಹಾಕಿ, ಪ್ರತಿಯೊಂದನ್ನೂ ಅನುಮಾನದಿಂದ ನೋಡಿ ನೋಡಿ ಸಾವು ನಮ್ಮ ತಲೆದಿಂಬಾಗಿದೆ...(ಪು. 54)

ಹೀಗೆ ಪ್ರೀತಿಗಳು, ಬಂಧನಗಳು, ಭಾವನಾತ್ಮಕ ಸ್ಥಿರತೆಯ ವಿಚಾರಗಳಲ್ಲಿ ಹೆಣ್ಣು ತನ್ನ ಇವುಗಳ ಅಥವಾ ವ್ಯಕ್ತಿತ್ವದ ಆಯ್ಕೆಯ ಪ್ರಶ್ನೆ ಅನಿವಾರ್ಯವಾಗುತ್ತಿದೆ. ಸುತ್ತ-ಮುತ್ತಲಿನ ಸಂಸ್ಕೃತಿ ಪಿತೃಪ್ರಧಾನ ಮೌಲ್ಯದ ಛಾಪು ಪಡೆದಿರುವಾಗ ವ್ಯಕ್ತಿಯಾಗಿ ಹೋರಾಟ ಬಯಸುವ ಯಾವುದೇ ಹೆಣ್ಣಿಗೆ ಇದು ಅಗತ್ಯದ ಅನಿವಾರ್ಯವಾಗುತ್ತದೆ. ತಾಯಿಗೆ ಒತ್ತಾಸೆಯಾಗಿ ನಿಲ್ಲುವುದನ್ನು ನಿರ್ಧರಿಸುವ ಕಮಲಳ ಆಯ್ಕೆ ಇಲ್ಲಿ ಈ ಬಗೆಯದೇ. ರಾಮಣ್ಣ ನೋಡಿದ ಗಂಡು ಬೇಡ ಎನ್ನುವ ಜಗನ್ನಾಥನ ರೀತಿ ಉಡಾಫೆಯದಾದರೆ, ಕಮಲಳ ಅಭಿವ್ಯಕ್ತಿಯೇ ಬೇರೆ ರೀತಿಯದು. ಕಮಲ ಹೇಳುತ್ತಾಳೆ.

'ನಾನೀಗ ಈ ಮದುವೆಗೆ ಒಪ್ಪಿದ್ರೆ ನಿನಗೆ ಸಂಕೋಚವಾಗುತ್ತಾ ಅಮ್ಮ ? ಆತ ಯಾರೋ ನಾನು ನೋಡಿಲ್ಲ, ಎಂಥವನೋ ಗೊತ್ತಿಲ್ಲ, ಅವನು ನನ್ನನ್ನು ಬಿಟ್ಟು ಅಪ್ಪ ಹೋದ ಹಾಗೆ ಎಲ್ಲಿಯೋ ಹೋಗ್ಬಿಡಬಹುದು. ಕೆಟ್ಟದ್ದೆಲ್ಲ ಮಾಡಬಹುದು. ಭಿಕಾರಿಯಾಗಬಹುದು... ಆದ್ರೆ ಪರವಾಯಿಲ್ಲ, ಹೇಳಮ್ಮ, ನಿನಗೆ ಸಂತೋಷವಾಗೋದಾದ್ರೆ. ಅಪ್ಪನ್ನ ಬಿಟ್ಟು ನೀನು ಸುಖವಾಗಿರೋದು ನಿಜವಾದ್ರೆ, ಹೇಳಿಬಿಡು, ಈಗಲೇ ಒಪ್ಪಿಗೆ ಕೊಟ್ಬಿಡ್ತೇನೆ–(ಪು. 32)

ಹೆಣ್ಣಿನ ಸಂವೇದನೆ ಈ ರೀತಿಯದು. ಜಗನ್ನಾಥನಿಗೆ ತಂದೆಯ ಮೇಲೆ ಸಿಟ್ಟು, ಸೇಡು, ರೋಷವಾದರೆ– ಕಮಲಳಿಗೆ ತಾಯಿಯ ಬಗ್ಗೆ ಅನುಕಂಪ. ತಂದೆಯ ಮೇಲಿನ ಅವಳ ಸಿಟ್ಟು ಜಗನ್ನಾಥನಂತೆ ತಾಯಿಯ ಮೇಲೆ ಹರಿಹಾಯುವುದಿಲ್ಲ. ಕಮಲೆ ತಾಯಿಗೆ ಆಸರೆಯಾಗಿ ನಿಲ್ಲುವಲ್ಲಿ ಹೆಣ್ಣು ಜನಾಂಗದ ನೋವಿದೆ. ದುಃಖವಿದೆ.

ತಂದೆ ಸತ್ತಾಗ-ಮನೆ ತನ್ನ ಹೆಸರಿಗಾಗಿರುವುದನ್ನು ಹೇಳಿದ ರಾಮಣ್ಣ ಕಮಲೆಗೆ ತಾನು ಗಂಡು ಹುಡುಕಿ ಮದುವೆ ಮಾಡುವುದಾಗಿ ಹೇಳಿದಾಗ ಆಕೆ ಹೇಳುತ್ತಾಳೆ:

'ಅಪ್ಪನ ಹೆಸರು ತಂದ ಗಂಡು ಬೇಡ ಅಂದೆ, ಅಣ್ಣನ ದ್ವೇಷ ತಂದ ಗಂಡು ಬೇಡ ಅಂದೆ, ಈಗ ಸಾಲ ಮತ್ತೊಂದು ಗಂಡು ತರ್ತಾ ಇದೆ.' (ಪು. 56)

ಕಮಲ ಹೀಗೆ ಎಲ್ಲರ ಹಂಗು ತೊರೆದು ನಿಲ್ಲಬೇಕಾಗುತ್ತದೆ. ತಾಯಿಯೊಬ್ಬಳದೇ ಆಸರೆ. ಪುಸ್ತಕ ಸಂಸ್ಕೃತಿಯಲ್ಲಿ ಉನ್ನತ ಸ್ವಾತಂತ್ರ್ಯದ ಕಲ್ಪನೆಯಿರುವ, ಜೊತೆಗೆ ಸ್ವಂತ ವ್ಯಕ್ತಿತ್ವದ ಛಾಪು ಪಡೆಯಬಯಸುವ ಪ್ರತಿಯೊಬ್ಬ ಮಹಿಳೆಯು ಇಲ್ಲಿಯವರೆಗಿನ ಪ್ರೀತಿ. ಪ್ರೇಮ, ಸುಮಧುರ ಭಾವನೆಗಳ ನಂಬಿಕೆಗಳನ್ನು ಹೊಸದಾಗಿ ವ್ಯಾಖ್ಯಾನಿಸುವ, ಹಾಗೂ ಬೇರೆಯಾದ ಮಜಲುಗಳಲ್ಲಿ ಕಂಡುಕೊಳ್ಳುವ ಒತ್ತಡ ಉಂಟಾಗುತ್ತಿದೆ. ಈ ರೀತಿಯ ಹೆಣ್ಣಿನ ಬಗ್ಗೆಗಿನ ಪ್ರಶ್ನೆಗಳನ್ನು ಗಂಭೀರಗತಿಯಲ್ಲಿ ಎತ್ತಿಯೂ, ಈ ನಾಟಕ ಸೋಲುವುದು ಇದರ ಸರಳ ಬಂಧದಲ್ಲಿ, ಎಂದು ಹೇಳಬಹುದು.

* * *

ಕೊನೆಯದಾಗಿ 'ಮುಸ್ಸಂಜೆಯ ಕಥಾ ಪ್ರಸಂಗ'ದ ಬಗ್ಗೆ ಒಂದು ಮಾತು ಬರೆಯಬೇಕು. ಈ ಕಾದಂಬರಿಯನ್ನು ಬಹುಶಃ ಸ್ತ್ರೀವಾದೀ ದೃಷ್ಟಿಕೋನದಿಂದ ಬಹಳಷ್ಟು ಅದ್ಭುತವಾದ ಕಾದಂಬರಿಯೆಂದೇ ಪರಿಗಣಿಸಬಹುದು. ಹಾಗಾಗಿ ಈವರೆಗೆ ನಾನು ಬಳಸಿದ ವಿಮರ್ಶಾ ದೃಷ್ಟಿಕೋನ ಮೀರಿ ಇದು ಸಾಹಿತ್ಯಕ್ಕೆ ಅದ್ಭುತ ಕೊಡುಗೆ ಎನ್ನುವಲ್ಲಿಯೇ ಈ ಕಾದಂಬರಿಯ 'ಹಿರಿಮೆ'ಯನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

— ಟಿಪ್ಪಣಿ —

**ಅತಿ ಪ್ರಜ್ಞೆ :— ಸೂಕ್ಷ್ಮ ಪ್ರಜ್ಞೆ (Sensitive)**

ದಾಸ್ತೊವಸ್ಕಿಯ ಸೋನಿಯ :— 'ಕ್ರೈಮ್ ಅಂಡ್ ಪನಿಷ್‌ಮೆಂಟ್'ನಲ್ಲಿ ಬರುವ ಈ ಪಾತ್ರ, ನಾಯಕ 'ಲಾಸ್ಕೊಲ್‌ನಿಕೋವ್'ನ ಜೀವನದಲ್ಲೂ ಮೂಲ ಭೂತ ಪ್ರಶ್ನೆ ಎತ್ತುತ್ತದೆ.

ಟಾಲ್‌ಸ್ಟಾಯ್ 'ಅನ್ನಾ' :—'ಅನ್ನಾ ಕರೆನಿನ್ನಾ'ದ ನಾಯಕಿ ಇಬ್ಬರನ್ನು ಪ್ರೀತಿಸಿ ಕೊನೆಗೆ ದುರಂತದಲ್ಲಿ ಕೊನೆಯಾಗುವ ಈಕೆಯ ಬದುಕಿನ ದ್ವಂದ್ವಗಳನ್ನು ಟಾಲ್‌ಸ್ಟಾಯ್ ಅದ್ಭುತವಾಗಿ ಚಿತ್ರಿಸುತ್ತಾರೆ.

# ಮಹಿಳೆ - ಸಾಹಿತ್ಯ - ಸಮಾಜ (ಆಯ್ದ ಭಾಗ)

ರಚನಾ ಪ್ರಕಾಶನ, ಮೈಸೂರು-23

ಲೇ : ವಿಜಯಾ ದಬ್ಬೆ

ಸ್ತ್ರೀವಾದಿ ದೃಷ್ಟಿಕೋನದಿಂದ ಸಾಹಿತ್ಯ ಅಥವಾ ಇತರೇ ಯಾವುದೇ ಬರಹಗಳನ್ನು ಅಭ್ಯಸಿಸುವಾಗ ಅಲ್ಲಿಯ ಭಾಷೆ, ಆಕೃತಿ, ವಸ್ತು, ಶೈಲಿ ಇಂತಹವುಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಈ ಉದ್ದೇಶದಿಂದ ಸ್ತ್ರೀಯರ ಚಿತ್ರಣಗಳನ್ನೊಳಗೊಂಡ ಭಾಗಗಳನ್ನು ಕಾದಂಬರಿ, ವಿಮರ್ಶೆ ಲೇಖನ ಇತ್ಯಾದಿ ಪ್ರಕಾರಗಳಿಂದ ಆಯ್ದು ಇಲ್ಲಿ ಪ್ರಕಟಿಸುತ್ತಿದ್ದೇವೆ. ನಿಮ್ಮ ಗಮನಕ್ಕೆ ಬಂದಂತಹ ಆಯ್ದ ಭಾಗಗಳನ್ನು ಲೇಖಕಿ ಲೇಖಕ ಹೆಸರು, ಪ್ರಕಟಣೆ, ದರ ಇತ್ಯಾದಿ ವಿವರಗಳೊಂದಿಗೆ ನೀವು ಕಳುಹಿಸುವುದನ್ನು ನಾವು ಸ್ವಾಗತಿಸುತ್ತೇವೆ. ಸ್ತ್ರೀವಾದಿ ದೃಷ್ಟಿಕೋನವನ್ನು ಬೆಳೆಸುವಲ್ಲಿ ಇಂತಹ ಪ್ರಯತ್ನಗಳು, ಸಂವಾದಗಳು ಅಗತ್ಯ ಎಂದು ನಮ್ಮ ನಂಬಿಕೆ.

ಈ ಶತಮಾನದ ಎರಡನೆಯ ದಶಕದಲ್ಲಿ ಕೊನೆಗೊಮ್ಮೆ ಬರಹಗಾರ್ತಿಯರು ಹೊಸಗನ್ನಡ ಸಾಹಿತ್ಯಕ್ಕೆ ಕಾಲಿಟ್ಟರು. ಇವರೊಂದಿಗೆ ಕನ್ನಡ ಸಾಹಿತ್ಯದ ಒಂದು ವಿಭಿನ್ನ ಎಳೆಯೂ ಕಾಲಿಟ್ಟಿತು. ಕೆಲವು ಅಪವಾದಗಳ ಹೊರತಾಗಿ ಪುರುಷ ದೃಷ್ಟಿಕೋನವನ್ನೇ ಪ್ರತಿಬಿಂಬಿಸುತ್ತಿದ್ದ ಸಾಹಿತ್ಯಕ್ಕೆ ಸ್ತ್ರೀ ದೃಷ್ಟಿಕೋನವೊಂದನ್ನು ಸೇರಿಸುವ ಪ್ರಯತ್ನ ಇಲ್ಲಿಂದ ಆರಂಭವಾಯಿತು. ಈ ಆರಂಭ ಒಮ್ಮೆಗೇ ಸಹೃದಯರ ಮೆಚ್ಚುಗೆಯನ್ನು ಸೂರೆಗೊಳ್ಳಲಿಲ್ಲವಾದರೂ ಸಾಹಿತ್ಯದ ಸ್ವರೂಪವನ್ನು ತಲೆಕೆಳಗು ಮಾಡಲಿಲ್ಲವಾದರೂ ಒಂದು ವಿಭಿನ್ನ ದೃಷ್ಟಿಕೋನದ ಬೆಳವಣಿಗೆಗೆ ನಾಂದಿ ಹಾಡಿತು. ಮುಂದಿನ ದಶಕಗಳ ಮಹಿಳಾ ಸಾಹಿತ್ಯದ ಸಾಧನೆಗಳಿಗೆ ಹಸಿರು ಭಾವುಟ ತೋರಿತು. ತಿರುಮಲಾಂಬ, ಕಲ್ಯಾಣಮ್ಮನವರಂಥ ಮೊದಲ ಹಂತದ ಆದ್ಯ ಲೇಖಕಿಯರು ಮಹಿಳೆಯರ ಅಂದಿನ ಕೆಲವು ತುರ್ತು ಸಮಸ್ಯೆಗಳಿಗೆ ಸಹಜವಾಗಿಯೇ ಓಗೊಟ್ಟರು. ಕೇಶಮುಂಡನವೇ ಮೊದಲಾದ ವಿಧವಾ ಸಮಸ್ಯೆಗಳು, ಬಾಲ್ಯವಿವಾಹ, ಸ್ತ್ರೀ ಶಿಕ್ಷಣ, ವಿಷಮವಿವಾಹ ಮೊದಲಾದುವು ಅವರ ಕಾಳಜಿಗಳ ಕೇಂದ್ರಗಳಾದವು. ಮೇಲ್ನೋಟಕ್ಕೆ 'ಪತಿಯು ದೈವತ್ವ'. 'ಸತೀ ಧರ್ಮ'ಗಳು ಸಾಕಷ್ಟು ಸುರಕ್ಷಿತವಾಗಿಯೇ ಇದ್ದವು. ಹಾಗೆ ನೋಡಿದರೆ ಆ ಮೌಲ್ಯಗಳ ರಕ್ಷಾ ಹಲಗೆಗಳನ್ನು ಹಿಡಿದೇ ಸ್ತ್ರೀಯರ ಹೋರಾಟ ಇಲ್ಲಿ ಆರಂಭವಾಯಿತು, ಸದ್ಗೃಹಿಣಿತ್ವಕ್ಕಾಗಿ ಅಕ್ಷರಜ್ಞಾನ, ಮಾತೃತ್ವಕ್ಕಾಗಿಯೇ ಅವಳ ಮಾನಸಿಕ ಬೆಳವಣಿಗೆಯು ಅಗತ್ಯವಿದೆಯೆಂದು ಪ್ರತಿಪಾದಿಸಲಾಯಿತು. ಸಾಂಪ್ರದಾಯಿಕ ಮೌಲ್ಯಗಳಿಗೆ ಪೂರಕವಾಗಿಯೇ ಇದ್ದ ಈ ಘೋಷಿತ ಉದ್ದೇಶಗಳು ವಿರೋಧಗಳನ್ನು ತಗ್ಗಿಸಿ ಹೊಸ ಹಾದಿಯ ಪಯಣವನ್ನು ಕೆಲಮಟ್ಟಿಗೆ ಸುಗಮಗೊಳಿಸಿದವು. ಈ ಪ್ರಾರಂಭ ಕೊನೆಗೆ ಅವರು ಹಿಡಿದ ರಕ್ಷಾಸಲಹೆಗಳ ವಿರುದ್ಧವಾಗಿಯೇ ನಿಂತಾವು ಎಂಬ ಕಲ್ಪನೆ ಆಗ ಸ್ಪಷ್ಟವಾಗಿಲ್ಲದಿದ್ದರೂ ಹಾಗಾಗುವುದು ಚರಿತ್ರೆಯ ಅನಿವಾರ್ಯವಾದ ಬೆಳವಣಿಗೆಯೇ ಆಗಿತ್ತು/ಆಗಿದೆ. ಅಕ್ಷರ ಜ್ಞಾನಕ್ಕಾಗಿ ಶಾಲೆ ಹೊಕ್ಕ ಹುಡುಗಿಯರು ಶಿಕ್ಷಣದ ಒಂದೊಂದೇ ಮೆಟ್ಟಲು ಹತ್ತಿದಂತೆ, ಪಡೆದ ಶಿಕ್ಷಣದಿಂದ ಮಧ್ಯಮ ವರ್ಗದ ಮಹಿಳೆಯರೂ ಮನೆಯಿಂಧ ಹೊರಗೆ ಕಾಲಿಡಲು ತೊಡಗಿದಂತೆ ಸ್ತ್ರೀಯರ ಜೀವನ ಸ್ವರೂಪ ಮತ್ತು ಸಮಸ್ಯೆಗಳ ಸ್ವರೂಪ ಕ್ರಮೇಣ ಬದಲಾಗತೊಡಗಿದವು. ಈ ಹಂತದಲ್ಲಿ ಸ್ತ್ರೀಯರ ಬದುಕಿನ ಬೇರೆ ಕೆಲವು ಸಮಸ್ಯೆಗಳು ಮುಖ್ಯವಾದವು. ವರದಕ್ಷಿಣೆ, ವಿಷಮ ವಿವಾಹ, ವೇಶ್ಯಾ ಸಮಸ್ಯೆಗಳು, ವಿಧವಾ ವಿವಾಹದ ಸಮಸ್ಯೆ ಮೊದಲಾದವುಗಳು ಎದ್ದು ಕಾಣುವ ಕೆಲವು ಕೇಂದ್ರಗಳು. ಕೊಡಗಿನ ಗೌರಮ್ಮ, ಶ್ಯಾಮಲಾದೇವಿ, ಜಯಲಕ್ಷ್ಮೀದೇವಿ ಸರಸ್ವತಿಬಾಯಿ, ರಾಜವಾಡೆ,

(24ನೇ ಪುಟ ನೋಡಿ)

# ಅಗೋಚರ ಸಾಮಾಜೀಕರಣ

**ವಿ. ಗಾಯತ್ರಿ**

ಇಂದು ಮಹಿಳಾ ಗುಂಪುಗಳ ಮೊದಲ ಕಳಕಳಿಯನ್ನು ಪಡೆದುಕೊಳ್ಳುತ್ತಿರುವುದು 'ಮಹಿಳೆಯರ ಸಂಘಟನೆ'. ಯಾವುದೇ ವ್ಯವಸ್ಥಿತ ಗುಂಪು ಚಟುವಟಿಕೆಗಳ ಮೂಲಾಧಾರವೇ ಸಂವಹನ ಆಗುತ್ತದೆ. ಈ ನಿಟ್ಟಿನಲ್ಲಿ ಹಿಂದಿರುಗಿ ನೋಡಿದಾಗ ಸಾಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಹೆಂಗಸರ ನಡುವಣ ಸಂವಹನಾ ಪ್ರಕ್ರಿಯೆ ತೀರಾ ದುರ್ಬಲವಾಗಿತ್ತು ಎಂದು ಮಹಿಳಾ ಗುಂಪುಗಳು ಬಲವಾಗಿ ನಂಬುವಂತಾಗಿದೆ. "ಹೆಂಗಸರಲ್ಲಿ ಸುದ್ದಿ ಸಂಗ್ರಹಣೆ ಎಂಬುದು ಬಾವಿ, ದೇವಸ್ಥಾನ, ಮಾರುಕಟ್ಟೆ ಮುಂತಾದ ಸೇರುವ ಸ್ಥಳಗಳಿಗೆ ಮಾತ್ರ ಸೀಮಿತವಾಗಿತ್ತು" (ಪುಟ. 173–ಶ್ರಮಶಕ್ತಿ). ಹೀಗಿರುವಾಗ ಮಹಿಳೆಯರಲ್ಲಿ ಮಾಹಿತಿಯ ಹರಡುವಿಕೆಗೆ ಹೊಸ

ಏಕೆಂದರೆ ಸಾಮಾಜಿಕೀಕರಣ/ಸಮಷ್ಟಿ ಬದುಕಿನ ಪರಿಕಲ್ಪನೆ ನಮ್ಮ ಸಾಂಪ್ರದಾಯಿಕ ಸಮಾಜದ ಹೆಂಗಸರಿಗೆ ಹೊಸತಲ್ಲ ಆದರೆ ಅದರ ಸ್ವರೂಪ ಬೇರೆ ಇದ್ದು, ಅದು ಹೆಚ್ಚು ಅಗೋಚರವಾಗಿದ್ದುದರಿಂದ ಅದರೆಡೆಗೆ ಸ್ಪಷ್ಟ ಗಮನ ಸಿಕ್ಕಿಲ್ಲವೇನೋ/ಅದೂ ಅಲ್ಲದೆ ಇವುಗಳಲ್ಲಿನ ಸ್ತ್ರೀ ವಿರೋಧೀ ಅಂಶಗಳ ಅಧೀನಾ ಸಂಬಂಧದಿಂದ ಸ್ತ್ರೀವಾದೀ ಚರ್ಚೆಗಳಲ್ಲಿ ಇವು ಪ್ರಾಮುಖ್ಯತೆ ಪಡೆಕೊಳ್ಳಲು ಸಾಧ್ಯವಾಗಿಲ್ಲ. ಸಾಮಾಜಿಕೀಕರಣದ ಪರಿಕಲ್ಪನೆಯನ್ನು ತುಂಬಾ ಹಿಂದಕ್ಕೆ ಹೋಗಿ ಜಾನಪದ ಸಮಾಜದಿಂದ ಗುರುತಿಸಬಹುದಾಗಿದೆ. ಜಾನಪದ ಬದುಕು ಸಂಘಜೀವನದ ಕಲ್ಪನೆಯ ಅತ್ಯುಚ್ಚ ಅಭಿವ್ಯಕ್ತಿಯನ್ನು ಕೊಡುತ್ತದೆ. ಇಲ್ಲಿ ಹೆಂಗಸರಿಗೆ ತಮ್ಮದೇ

**ಇಂದು ಆಧುನಿಕತೆಯ ಮಧ್ಯ ಪ್ರವೇಶದಿಂದ, ನಿಸರ್ಗ ಮಾನವ ವಿರೋಧಿ ಯೋಚನೆಗಳಿಂದ ದೇಸೀ ಸಂಸ್ಕೃತಿಯ ಮೇಲೆ ತುಂಬಾ ಕೆಟ್ಟ ಪರಿಣಾಮ ಆಗಿದೆ. ಹೆಂಗಸರ ಮುಕ್ತ ಸಾಮಾಜಿಕ ಬದುಕು ನಲುಗಿದೆ. ಆಧುನಿಕತೆ ಉಂಟುಮಾಡಿರುವ ತಲ್ಲಣಗಳಿಂದ ಬದುಕು ತುಂಬಾ ಔಪಚಾರಿಕ ರೂಪ ಪಡೆದೇ ಆಳಗಳನ್ನು ಕಳೆದುಕೊಂಡುಬಿಟ್ಟದೆ.**

ಬಗೆಯ ಸಂವಹನ ಮಾದರಿಗಳನ್ನು ಹುಟ್ಟುಹಾಕುವ ತತ್‌ಕ್ಷಣದ ಅವಶ್ಯಕತೆ ಮಹಿಳಾ ಗುಂಪುಗಳಿಗಿದೆ. ಅದು ಗಮನಾರ್ಹ ರೀತಿಯಲ್ಲಿ ಪ್ರಯತ್ನವನ್ನು ಪಡೆದುಕೊಳ್ಳುತ್ತಿದೆ ಕೂಡ. ಇಂತಹ ಪ್ರಯತ್ನಗಳು ಶ್ಲಾಘನೀಯವಾದರೂ, ಈ ನಿಟ್ಟಿನ ಪ್ರಯತ್ನಗಳಲ್ಲಿ ತೊಡಗಿಸಿಕೊಳ್ಳುವಾಗ ಸಾಂಪ್ರದಾಯಿಕ ಗ್ರಾಮೀಣ ಸಮಾಜದ ಹೆಂಗಸರಲ್ಲಿ ರೂಢಿಯಲ್ಲಿದ್ದ ಬೇರೆ, ಬೇರೆ ರೀತಿಯ ಸಂವಹನ ಪ್ರಕಾರಗಳು, ಜ್ಞಾನ ಹಂಚಿಕೊಳ್ಳುತ್ತಿದ್ದ ರೀತಿ, ಸಮಾಜಿಕೀಕರಣ–ಒಟ್ಟಿನಲ್ಲಿ ಸಮಷ್ಟಿ ಬದುಕಿನ ಪರಿಕಲ್ಪನೆಯನ್ನು ಗಣನೆಗೆ ತಂದುಕೊಂಡು ಮುಂದುವರೆಯುವುದು ತುಂಬಾ ಮುಖ್ಯವಾಗುತ್ತದೆ.

ಅಭಿವ್ಯಕ್ತಿಗೆ ಸಾಕಷ್ಟು ಅವಕಾಶಗಳು ಇವೆ. ಇನ್ನೂ ಮುಂದುವರೆದು ಹೇಳಬೇಕೆಂದರೆ ಅಂತಹ ಅವಕಾಶಗಳನ್ನು ಅವರು ಸೃಷ್ಟಿಸಿಕೊಂಡಿದ್ದಾರೆ. ಜಾನಪದ ಆಚರಣೆಗಳೊಟ್ಟಿಗೆ – ದಂತಕಥೆಗಳು, ನಂಬಿಕೆಗಳು, ಸಾಂಸ್ಕೃತಿಕ ಪ್ರಕಾರಗಳು ಇತ್ಯಾದಿ, ಹೆಂಗಸರಿಗೆ ಹಾಸುಹೊಕ್ಕಿನ ಸಂಬಂಧ ಇದೆ. ಜಾನಪದ ಕಲೆಯಲ್ಲಿ ಹೆಂಗಸರಿಗೆ/ಅವರ ಅಭಿವ್ಯಕ್ತಿಗೇ ಸೀಮಿತವಾದ ಹಾಕುಗಳು, ಇತರೇ ಕಲಾ ಪ್ರಕಾರಗಳು ಹೇರಳವಾಗಿವೆ. ದಿನನಿತ್ಯ ಬದುಕಿನ ಕೆಲಸದ ಹೊರೆಯನ್ನು ಸಮದೂಗಿಸಿಕೊಂಡು ಹೋಗಲು ಹೆಂಗಸರು ಹಾಡನ್ನು ಕಟ್ಟಿ, ಜತೆಯವರಿಗೆ ಕಲಿಸಿ, ಒಟ್ಟಿಗೆ ಹಾಡುತ್ತಿದ್ದರು. ರಾಗಿ

ಬೀಸುವ ಹಾಡೊಂದು ಇಂತಹ ಸಮಷ್ಟಿ ಬದುಕಿನ ಕಲ್ಪನೆಯನ್ನು ಸ್ಪಷ್ಟೀಕರಿಸುತ್ತದೆ.

"ಕಲ್ಲಮ್ಮ ಮಾತಾಯಿ, ಮಲ್ಲಮ್ಮ ರಾಗಿಯ
ನೀ ಝಲ್ಲ ಝಲ್ಲನೆ ಉದುರಮ್ಮ
ನೀ ಝಲ್ಲ ಝಲ್ಲನೆ ಉದುರಮ್ಮ ನಾವ್ ನಿನಗೆ
ಬೆಲ್ಲದ ಆರತಿಯ ಬೆಳಗೇವು".

ಇನ್ನೊಂದು ಹಾಡಿನಲ್ಲಿ (ಜನಪ್ರಿಯ "ಭಾಗ್ಯದ ಬಳೆಗಾರ ಹೋಗಿಬಾ ನನ್ ತವರೀಗೆ") ಹೆಣ್ಣೊಬ್ಬಳು ಬಳೆಗಾರರನ್ನು ತನ್ನ ತವರಿಗೆ ಹೋಗಿ ತನ್ನ ತಾಯಿ, ಗೆಳತಿಯರಿಗೆ ಬಳೆಕೊಡಲು ಕೇಳಿಕೊಳ್ಳುತ್ತಾ ಅವರಿಗಿಷ್ಟವಾದ ಬಣ್ಣದ ಚುಕ್ಕಿಯ ಬಳೆಗಳನ್ನು ವಿವರಿಸಿ ಹೇಳಿ, ಪ್ರಕೃತಿಯ ವಿವಿಧ ವಿವರಗಳನ್ನು ದಾರಿಗುರುತಾಗಿ ಹೇಳುತ್ತಾಳೆ.

ಹೆಂಗಸರು ಹಾಡುವ ಸೋಬಾನೆ ಹಾಡುಗಳಿಲ್ಲದೆ ಜಾನಪದ ಸಮಾಜದಲ್ಲಿ ಇಂದಿಗೂ ಮದುವೆಗಳು ಸಂಪೂರ್ಣವಾಗಲು ಸಾಧ್ಯವೇ ಇಲ್ಲ. ತಮ್ಮ ಹೆಣ್ಣು ಮಗಳೊಬ್ಬಳು ಮದುವೆಯಾಗಿ ಹೋಗುತ್ತಾಳೆಂದರೆ ಇಡೀ ಕೇರಿಯ ಹೆಂಗಸರು ಸೋಬಾನೆ ಹಾಡಲು ಅಲ್ಲಿರಬೇಕು. ರಾತ್ರಿ ಪೂರಾ ಇದು ನಡೆಯುತ್ತದೆ. ರಾಮಾಯಣ-ಮಹಾಭಾರತಗಳ ಲೌಕಿಕ-ಆಧ್ಯಾತ್ಮಗಳಿಂದ ಹಿಡಿದು ನವದಂಪತಿಗಳ ಪರಸ್ಪರದೆಡೆಗಿನ ಮತ್ತು ಸುತ್ತಲಿನವರೆಡೆಗಿನ ಕರ್ತವ್ಯ/ಜವಾಬ್ದಾರಿಗಳವರೆಗಿನ ಎಲ್ಲ ವಿವರಗಳು ಇಲ್ಲಿರುತ್ತವೆ. ಇಂದಿಗೂ ಮುಖ್ಯವಾಗಿ ಮಲೆನಾಡು ಪ್ರದೇಶಗಳಲ್ಲಿ ಪ್ರಚಲಿತದಲ್ಲಿರುವ ನಾಟಿ ಹಾಡುಗಳು ಒಳಗೊಳ್ಳಸದೆ ಬಿಟ್ಟ ಬದುಕಿನ ಸತ್ಯಗಳಿಲ್ಲ, ಹಾಗೆಯೇ ಹೊಗಳದೆ/ಬಯ್ಯದೆ ಬಿಟ್ಟ ದೇವಾನುದೇವತೆಗಳಿಲ್ಲ. ಈ ಹಾಡುಗಳ ಕತೃಗಳಾದ ಹೆಂಗಸರು ಇಲ್ಲೆಲ್ಲಾ ಪ್ರೀತಿ, ದ್ವೇಷ, ಸಿಟ್ಟು, ಅಸೂಯೆ, ಕಾಮ, ಪ್ರೇಮ ಹೀಗೆ ತಮ್ಮೆಲ್ಲಾ ಭಾವ ತೀವ್ರತೆಗಳ ಪೂರ್ಣ ಅಭಿವ್ಯಕ್ತಿಯನ್ನು ಕೊಡುತ್ತಾರೆ. ಹಾಗೆಯೇ ಸುತ್ತಲಿನ ಗಿಡ, ಮರ, ಬಳ್ಳಿ, ಹೂವು, ಹಣ್ಣು, ತೊರೆ, ಬೆಟ್ಟ, ಪ್ರಾಣಿ-ಪಕ್ಷಿ ಹೀಗೆ ಪ್ರಕೃತಿಯ ಪ್ರತಿ ವಿವರಗಳೂ ಅವಿಭಾಜ್ಯವೆಂಬಂತೆ ಬೆಸೆದುಕೊಂಡಿರುತ್ತವೆ.

ಜಾತಿ/ವ್ಯಕ್ತಿ ಆಧಾರಿತ ಸಮಾಜದಲ್ಲಿ ಬೇರೆ ಬೇರೆ ವ್ಯಕ್ತಿಯ ಹೆಂಗಸರಿಗೆ ಸಮುದಾಯದಲ್ಲಿ ತಮ್ಮದೇ ಆದ ಘನತೆ/ಗೌರವಗಳು ಸಿಗುತ್ತಿದ್ದುದು ಒಂದು ವಿಶೇಷ ಕುತೂಹಲದ ಸಂಗತಿ. ಗಾಣಗಿತ್ತಿ, ಸೂಲಗಿತ್ತಿ, ಅಗಸರವಳು ಮುಂತಾದವರನ್ನು ಇಲ್ಲಿ ಹೆಸರಿಸಬಹುದು. ಮಗುವಿನ ನಾಮಕರಣ ಸಂದರ್ಭದಲ್ಲಿ ಹೆರಿಗೆ ಮಾಡಿಸಿದ ಸೂಲಗಿತ್ತಿಗೇ ಮೊದಲ ತಾಂಬೂಲ ! ಸಾಂಪ್ರದಾಯಿಕ ಸಮಾಜದಲ್ಲಿನ ಹೆಂಗಸರ ಒಡನಾಟಗಳು / ಪರಸ್ಪರ ವರ್ತನೆಗಳು ಜಾತಿ/ವರ್ಗಗಳ ಬೇಲಿಯನ್ನು ಮೀರಿದಂತಹವು ! ಇಂತಹ ಉದಾಹರಣೆಗಳಿಗಾಗಿ ನಿರಾಶೆಯಿಲ್ಲದೆ ಹುಡುಕುತ್ತಾ ಹೋಗಬಹುದು.

ಗ್ರಾಮೀಣ ಜಾನಪದ ಸಮಾಜದ ರಚನೆ ಹೇಗಿರುತ್ತದೆಂದರೆ ಅಲ್ಲಿ ಸಾಮಾಜೀಕರಣವು ಬದುಕಿನ ಪ್ರತಿ ಸ್ತರದಲ್ಲೂ ಬಿಂಬಿತಗೊಳ್ಳುತ್ತಿರುತ್ತದೆ. ತುಂಬಾ ವಿರಳವಾಗಿ, ದೂರ-ದೂರ ಮನೆಗಳಿರುವ ಮಲೆನಾಡಿನಂತಹ ಹಳ್ಳಿಗಳಲ್ಲಿ ವ್ಯಕ್ತಿ-ವ್ಯಕ್ತಿಗಳ ನಡುವೆ ಸಂಪರ್ಕವೇ ಇಲ್ಲವೇನೋ ಎನಿಸುವಂತಿರುತ್ತದೆ. ಆದರೆ ವಾಸ್ತವದಲ್ಲಿ ಇಲ್ಲಿನ ಹೆಂಗಸರು ಪರಸ್ಪರರನ್ನೂ ತುಂಬಾ ಹತ್ತಿರದಿಂದ ಬಲ್ಲವರಾಗಿರುತ್ತಾರೆ. ಯಾವುದೋ ಒಂದು ಗದ್ದೆಕುಯಿಲಿಗೋ, ನಾಟಿಗೋ, ಇನ್ನಾವುದೇ "ಹೆಂಗಸರ ಸಂಬಂಧೀ" ಕೆಲಸಕ್ಕಾಗಿ ನಿರ್ದಿಷ್ಟ ಸ್ಥಳವೊಂದಕ್ಕೆ ಹೋಗಬೇಕಾದಾಗ ಹೆಂಗಸರು ಹಳ್ಳಿಯಿಂದ ಹಳ್ಳಿಗೆ ನಡೆಯುತ್ತಾ ಪ್ರತಿ ಹಳ್ಳಿಯಿಂದಲೂ ಹೆಂಗಸರನ್ನೂ ಜತೆಗೂಡಿಸಿಕೊಂಡು ನಡೆದು-ನಡೆದು ಕೆಲಸದ ಜಾಗ ಸೇರುತ್ತಾರೆ. ಸಂಜೆ ಮನೆ ಸೇರುವಾಗ ಇದು ಪುನರಾವರ್ತಿತಗೊಳ್ಳುತ್ತದೆ. ಈ ಸಮಯಗಳಲ್ಲಿ ಹೆಂಗಸರ ನಡುವೆ ಉಂಟಾಗುವ 'ಪರಸ್ಪರರಲ್ಲಿ ಹಂಚಿಕೆ'ಯ ಪ್ರಮಾಣ ಮತ್ತು ಮಟ್ಟ ಊಹೆಗೆ ಸಿಕ್ಕುವಂತಹದ್ದಲ್ಲ ! ಸ್ವಾಭಾವಿಕವಾಗಿಯೇ ಇವರು ವಿವಿಧ ಜಾತಿ/ಜನಾಂಗಗಳ ದುಡಿಯುವ ಹೆಂಗಸರು ! ಇದನ್ನೇ ನೀರು ಸಂಗ್ರಹಣೆ, ಎರುವಲು ಸಂಗ್ರಹಣೆಗಳಿಗೂ ಅನ್ವಯಿಸಿ ಹೇಳಬಹುದು.

ಉತ್ತರ ಕರ್ನಾಟಕ ಕಡೆಯ ಜನನಿಬಿಡ ಹಳ್ಳಿಗಳ ನೀರಿನ ಬರವನ್ನು ಕುರಿತು ಹೊಸತಾಗಿ ಹೇಳಬೇಕಾದ್ದೇನಲ್ಲ. ಬಡಹೆಂಗಸರು ತಲೆಯನ್ನು ಸೆರಗಿಂದ ಮುಚ್ಚಿ ಮುಸ್ಸಂಜೆಯಲ್ಲಿ ಸಣ್ಣ ಚೊಂಬಿನಲ್ಲಿ ನೀರು ಹಿಡಿದು ಒಟ್ಟಿಗೆ ಊರಹೊರಗೆ ಹೋಗುವುದು ವಾಡಿಕೆ. ಒಮ್ಮೆ ಯಾವುದೋ ಅಪರಾಧ ಸಂಬಂಧೀ ಮಾಹಿತಿ ಸಂಗ್ರಹಣೆಯಲ್ಲಿ ತೊಡಗಿದ್ದ ಪೋಲೀಸು ಅಧಿಕಾರಿಯೊಬ್ಬರು ಆ ಹೆಂಗಸರಂತೆಯೇ ಸೀರೆಯುಟ್ಟು, ತಲೆಮೇಲೆ ಸೆರಗು ಹೊದ್ದು ಇಂತಹ ಗುಂಪೊಂದನ್ನು ಸೇರಿದರು. ಅವರು

2-3 ದಿನಗಳಲ್ಲಿ ಅತ್ಯುಪಯುಕ್ತ ಮಾಹಿತಿ ಸಂಗ್ರಹ ಮಾಡಿದ್ದರು !

ಮಲೆನಾಡಿನಲ್ಲಿ ಅಡಿಕೆ ಕುಯಿಲು ಪ್ರಾರಂಭವಾಯಿತೆಂದರೆ ಅಕ್ಕಪಕ್ಕದ ಹೆಂಗಸರೆಲ್ಲಾ ಸುಲಿತಕ್ಕೆ ಅಲ್ಲಿ ಸೇರಿದ್ದಾರೆಂದೇ ಅರ್ಥ. ಆಳು ಹೆಂಗಸರು ಜತೆಗೆ ಒಡೇರ ಹೆಂಗಸರು ಕೂಡ ಇದರಲ್ಲಿ ಸೇರುವುದು ಸರ್ವೇ ಸಾಮಾನ್ಯ. ಅಡಿಕೆ ಸುಲಿತವೆಂದರೆ ಕೆಲಸದ ಜತೆಗೆ ಲೋಕಾಭಿರಾಮವಾಗಿಯೂ ಕಳೆಯುವ ಸಮಯ ! ಒಬ್ಬರನ್ನೊಬ್ಬರು ಛೇಡಿಸುವ ತುಂಬು ನಗುವಿನ ಗಳಿಗೆಗಳ ಜತೆಗೆ ಗಂಭೀರ ಚರ್ಚೆಗಳೂ ನಡೆಯುವುದು. ಹೀಗೊಮ್ಮೆ ಸೇರಿದ್ದ ಅಡಿಕೆ ಸುಲಿತದ ಹೆಂಗಸರ ಗುಂಪಿನಲ್ಲಿ ಜತೆ ಕೆಲಸಗಾರಳೊಬ್ಬಳ ವಿವಾಹಪೂರ್ವ ಸಂಬಂಧವೊಂದನ್ನು ಕುರಿತ ಚರ್ಚೆ ಬಂತು. ಈ ಲೇಖಕಿಯೂ ಇದ್ದ 2-3 ಗಂಟೆಗಳ ಚರ್ಚೆಯಲ್ಲಿ ಅಲ್ಲಿನ ವಿವಾಹಿತ–ಅವಿವಾಹಿತ ಹೆಂಗಸರೆಲ್ಲರೂ ಮುಕ್ತವಾಗಿ ಪಾಲ್ಗೊಂಡಿದ್ದರು. ಈ ವಿಷಯಕ್ಕೆ ಸಂಬಂಧಿಸಿದಂತಹ ಬೇರೆ ಬೇರೆ ಮುಖಗಳನ್ನು/ಸಾಧ್ಯತೆಗಳನ್ನು ಚರ್ಚೆಗೆ ತಂದುಕೊಂಡು ಅವರು ಯಾವುದೇ 'ಪ್ರೇರಕ'ರ ಸಹಾಯವಿಲ್ಲದೆ ಮಾತನಾಡುತ್ತಿದ್ದ ರೀತಿ ಆಶ್ಚರ್ಯತರಿಸುವಂತಿತ್ತು. ಒಗಟುಗಳ ಪರಸ್ಪರ ಬಾಣ ಪ್ರಯೋಗಕ್ಕಂತೂ ಇದು ಅತ್ಯಂತ ಪ್ರಶಸ್ತವಾದ ಸಮಯ. ಹಳ್ಳಿಯ ಪ್ರತಿ ಹುಡುಗಿಯೂ ಅಸಂಖ್ಯಾತ ಒಗಟುಗಳ ಆಗರವಾಗಿರುತ್ತಾಳೆ. ಪರಸ್ಪರರನ್ನು ಪ್ರಶ್ನಿಸುವ, ಕಲಿಯುವ, ಕಲಿಸುವ ಆ ಸಂಭ್ರಮ! ಆ ನಗು ! ಹೆಂಗಸರ ಸಮಷ್ಟಿ ಬದುಕಿನ ಅತ್ಯುಲ್ಲಾಸದ ಗಳಿಗೆಗಳು ಅಲ್ಲಿ ಕಾಣಸಿಗುತ್ತವೆ.

ಇಡೀ ದುಡಿತದ ನಂತರ ಬಂತೇ ಬಂತು ಜಾತ್ರೆ ! ಹೆಂಗಸರಿಗೆಲ್ಲಾ ಅದೆಂತಾ ಸಂಭ್ರಮ ! ಅಪರೂಪದ ಉಪಯೋಗಕ್ಕೆ ಪೆಟ್ಟಿಗೆಯಲ್ಲಿ ಜೋಪಾನ ಮಾಡಿಟ್ಟ ತಮ್ಮ ಉಡುವುಗಳಲ್ಲೆಲ್ಲಾ ಅತ್ಯುತ್ತಮವಾದದ್ದನ್ನು ಕೊಟ್ಟುಕೊಂಡು, ತಮಗೆ ಗೊತ್ತಿರುವ ಅತ್ಯುತ್ತಮ ರೀತಿಯಲ್ಲಿ ಸಿಂಗರಿಸಿಕೊಂಡು ಹಳ್ಳಿಯ ಹೆಂಗಸರೆಲ್ಲಾ ಒಟ್ಟಿಗೆ ಹೊರಡಬೇಕು ಜಾತ್ರೆಗೆ! ಜಾತ್ರೆಯ ಅಪ್ಪನಿಗೆ ಪೂಜೆ ಸಲ್ಲಿಸಿ, ಇಷ್ಟ ಬಂದದ್ದನ್ನು ಕೊಂಡುತಿಂದು, ಯೋಗ್ಯತೆಗೆ ಅನುಸಾರವಾಗಿ ವಸ್ತುಗಳನ್ನು ಕೊಂಡುಗೂಳ್ಳುತ್ತಾರೆ. ಪ್ರತಿ ಹೆಂಗಸೂ ಜಾತ್ರೆಯಿಂದ ಕೊನೇ ಪಕ್ಷ ಬಳೆಯನ್ನಾದರೂ ಕೊಂಡುಕೊಳ್ಳಲೇಬೇಕೆಂಬುದು ಪದ್ಧತಿ ಅದನ್ನೂ ಕೊಂಡುಕೊಳ್ಳಲಾಗದಂತವಳಿಗೆ ಜತೆಯವರೆಲ್ಲ ಹಣ ಸೇರಿಸಿ ಬಳೆ ತೆಗದುಕೊಡುತ್ತಾರೆ. ಹಳ್ಳಿಯ ಹೆಂಗಸರೆಲ್ಲರ ಕೈಯಲ್ಲೂ ಬಣ್ಣಬಣ್ಣದ ಡಜನ್‌ಗಟ್ಟಲೆ ಬಳೆಗಳು ಗಲಗಲಿಸುತ್ತಿಲೆಯೆಂದರೆ ಜಾತ್ರೆಯೊಂದು ಈಗಷ್ಟೇ ಬಂದು ಹೋಗಿದೆ ಎಂದು ಸುಮ್ಮನೆ ನಂಬಬಹುದು.

ಹಳ್ಳಿಯ ಹಬ್ಬಗಳು, ಮುಖ್ಯವಾಗಿ ಜಾನಪದ ಹಬ್ಬಗಳು ಹೆಂಗಸರ ಜಾನಪದ ಕಲಾ ಶ್ರೀಮಂತಿಕೆಯ ಅಭಿವ್ಯಕ್ತಿಯ ವೇದಿಕೆಗಳು. ಗಿರಿಜನ ಸಮಾಜದಲ್ಲಂತೂ ಹೆಂಗಸರು-ಗಂಡಸರೆಲ್ಲಾ ಇಂತಹ ಸಂದರ್ಭಗಳಲ್ಲಿ ರಾತ್ರಿಯಿಡೀ ಒಟ್ಟಿಗೆ ಹಾಡಿ-ಕುಣಿದು ಸಂಭ್ರಮಿಸುತ್ತಾರೆ. ಒಟ್ಟಿಗೆ ಪ್ರಾರ್ಥನೆ ಸಲ್ಲಿಸುವುದು, ಉಡುಗೊರೆ ಇತ್ಯಾದಿಗಳನ್ನು ಪರಸ್ಪರ ಹಂಚಿಕೊಳ್ಳುವುದು ಬ್ರಾಹ್ಮಣಿಕ ಸಮಾಜದಲ್ಲೂ ರೂಢಿಯಲ್ಲಿರುವಂತಹದ್ದು.

'ಹಂಚಿಕೊಳ್ಳುವಿಕೆ' ಹೆಂಗಸರ ಜಾಯಮಾನ. ಕಲಿಯುವುದು ಮತ್ತು ಕಲಿಸುವುದು ತುಂಬಾ ಮುಕ್ತವಾದ, ಸರಳವಾದ ಪ್ರಕ್ರಿಯೆಯಾಗಿದ್ದು, ಅಲ್ಲಿ ಯಾವುದೇ 'ಉದ್ದೇಶ'ಗಳು ಇರುತ್ತಿರಲಿಲ್ಲ. ಪರಸ್ಪರ ಮೇಲಿನ ಅವಲಂಬನೆಯಲ್ಲೇ ಅಪಾರ ಆತ್ಮಗೌರವ ಇರುತ್ತಿತ್ತು. ಮೇಲೆ ಹೇಳಿದವು ಕೇವಲ ಉದಾಹರಣೆಗಳಿಂದ ಈ ನಿಟ್ಟಿನಲ್ಲಿ ವಿಸ್ತಾರ ಚರ್ಚೆಯನ್ನು ಮುಂದೆ ಬೆಳೆಸಬಹುದು.

**ಈ ಸಮಯಗಳಲ್ಲಿ ಹೆಂಗಸರ ನಡುವೆ ಉಂಟಾಗುವ 'ಪರಸ್ಪರರಲ್ಲಿ ಹಂಚಿಕೆ'ಯ ಪ್ರಮಾಣ ಮತ್ತು ಮಟ್ಟ ಊಹೆಗೆ ಸಿಕ್ಕುವಂತಹದ್ದಲ್ಲ ! ಸ್ವಾಭಾವಿಕವಾಗಿಯೇ ಇವರು ವಿವಿಧ ಜಾತಿ/ಜನಾಂಗಗಳ ದುಡಿಯುವ ಹೆಂಗಸರೇ ! ಇವನ್ನೇ ನೀರು ಸಂಗ್ರಹಣೆಗಳಿಗೂ ಅನ್ವಯಿಸಿ ಹೇಳಬಹುದು.**

ಇಂದು ಆಧುನಿಕತೆಯ ಮಧ್ಯಪ್ರವೇಶದಿಂದ, ನಿಸರ್ಗ-ಮಾನವ ವಿರೋಧಿ ಯೋಜನೆಗಳಿಂದ ದೇಸೀ ಸಂಸ್ಕೃತಿಯ ಮೇಲೆ ತುಂಬಾ ಕೆಟ್ಟ ಪರಿಣಾಮ ಆಗಿದೆ. ಹೆಂಗಸರ ಮುಕ್ತ ಸಾಮಾಜಿಕ ಬದುಕು ನಲುಗಿದೆ. ಆಧುನಿಕತೆ ಉಂಟುಮಾಡಿರುವ ತಲ್ಲಣಗಳಿಂದ ಬದುಕು ತುಂಬಾ ಔಪಚಾರಿಕ ರೂಪ ಪಡೆದು ಆಳಗಳನ್ನು ಕಳೆದುಕೊಂಡು ಬಿಟ್ಟಿದೆ. ಆಧುನಿಕ ಸಮೂಹ ಮಾಧ್ಯಮಗಳ ಹೇರಿಕೆ ಹೆಂಗಸರ ಬದುಕಿನ ಕ್ರಿಯಾಶೀಲತೆಯನ್ನು ಹಾಳುಮಾಡಿ ಕೆಟ್ಟ ಅವಲಂಬನೆಯನ್ನ, ಕೀಳರಿಮೆಯನ್ನು ಬೆಳೆಸಿದೆ.

ಹೆಚ್ಚುತ್ತಿರುವ ಮುಳುಗಡೆಯಿಂದ ಹಳ್ಳಿಗಳ ಎತ್ತಂಗಡಿ ನಿರಂತರವಾಗಿ ನಡೆಯುತ್ತಿದ್ದು, ಇದರಿಂದ ಹಳೆ ಹಳ್ಳಿಗಳ ಕಣ್ಮರೆಯಾಗುತ್ತಾ, ಹೊಸ ಕಾಲೋನಿಗಳ ಹುಟ್ಟಿನ ಜತೆಗೆ ಹೊಸ ನಾಗರೀಕೃತ ಮೌಲ್ಯಗಳ ಹೇರಿಕೆ ಆಗುತ್ತಿದೆ. ಇಂತಹ ತಲ್ಲಣಿಸಿ ಹೋದ ಸ್ಥಿತಿಯಲ್ಲಿ ಬದುಕಿನ 'ಜೀವಂತಿಕೆ'ಯನ್ನೂ ಉಳಿಸಿಕೊಳ್ಳಬೇಕಾದ ಸವಾಲು ಮಹಿಳಾ ಗುಂಪುಗಳ ಮುಂದೆ ಇದೆ. ●

# ಎಂ. ಕೆ. ಇಂದಿರಾ ಮತ್ತು ಚಿತ್ರಭಾರತಿ

ಪುರುಷ ಪ್ರಧಾನ ಸಂಸ್ಕೃತಿಯು ಹೇರಿರುವ ಹಲವಾರು ಮೌಲ್ಯಗಳನ್ನು ಸ್ತ್ರೀಯರು ಮೈಗೂಡಿಸಿಕೊಂಡಿರುವುದು ಅಸಹಜ ಸಂಗತಿಯೇನಲ್ಲ. ಒಂದು ಸಮಾಜದ-ಹಾಗೂ ಅದರ ಸಂಸ್ಕೃತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ತನ್ನದೇ ಪ್ರಾಧಾನ್ಯತೆಯನ್ನು ಗಳಿಸಿರುವ ವಾತಾವರಣ ದಲ್ಲಿ ಭಿನ್ನಾಭಿಪ್ರಾಯಗಳು, ಅಲ್ಪಸಂಖ್ಯಾತರ ಅಭಿಮತ ಗಳು ಉಸಿರಾಡುವುದೇ ದುರ್ಲಭ.

ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಅವರ ಮೌಲ್ಯ ಗಳನ್ನು ಸ್ತ್ರೀಯರು ರೂಢಿಸಿಕೊಂಡು ಒಂದು ಬಗೆಯ ಭ್ರಮೆಯಲ್ಲಿ ಬದುಕುತ್ತಿದ್ದರೆ ಇಂತಹದೇ ಧೋರಣೆ ಗಳನ್ನು ಅಸ್ತ್ರ ಮಾಡಿಕೊಂಡು ಇತರ ಹೆಣ್ಣುಮಕ್ಕಳನ್ನು ಶೋಷಿಸುವುದು ಆತಂಕಕಾರಿಯಾದ ಸಂಗತಿ. ವರದಕ್ಷಿಣೆಯ ಸಾವಿನ ಪ್ರಕರಣಗಳಲ್ಲಿ ಅತ್ತೆಯುವಹಿಸುವ ಪಾತ್ರ, ಅತ್ತೆ ಸೊಸೆಯ ಸಂಬಂಧ ಮುಂತಾದವುಗಳು ಸ್ತ್ರೀಯರು ಪ್ರತಿಬಿಂಬಿಸುವ ಪುರುಷ ಪ್ರಧಾನ ಮೌಲ್ಯ ಗಳು. ಇಂತಹ ಮೌಲ್ಯಗಳು ಅತಿರೇಕದ ಸಂದರ್ಭಗಳಲ್ಲಿ ಮಾತ್ರ ವ್ಯಕ್ತವಾಗಬೇಕೆಂದಿಲ್ಲ. ದೈನಂದಿನ ಜೀವನದ ಸಣ್ಣ-ಪುಟ್ಟ ಕ್ಷುಲ್ಲಕ ಸಂಗತಿಗಳಲ್ಲೂ ವ್ಯಕ್ತವಾಗುತ್ತವೆ.

ಖ್ಯಾತ ಲೇಖಕಿ ಎಂ.ಕೆ.ಇಂದಿರಾ ತಮ್ಮ 'ಚಿತ್ರಭಾರತಿ' ಪುಸ್ತಕದಲ್ಲಿ ಅತ್ಯಾಚಾರದ ವಿಶ್ಲೇಷಣೆ ಮಾಡುವ ವಿಧಾನ ಈ ಹಿನ್ನೆಲೆಯಲ್ಲಿ ಪ್ರಶ್ನಾರ್ಹ. 'ಚಿತ್ರಭಾರತಿ ಪ್ರಾಯಶಃ ಕನ್ನಡ ಲೇಖಕಿಯೊಬ್ಬರು ಚಲನಚಿತ್ರ ಕುರಿತು ಬರೆದ ಪ್ರಥಮ ಪುಸ್ತಕ.' ಮಾಯಾಲೋಕದ, ಪರದೆಯ ಹಿಂದಿನ ಬದುಕನ್ನು ತಮ್ಮದೇ ಆದ ಸರಳ ಭಾಷೆಯಲ್ಲಿ ತೆರೆದಿಡುವ ಎಂ.ಕೆ.ಇಂದಿರಾ ಚಲನಚಿತ್ರಗಳಲ್ಲಿ 'ಅತ್ಯಾಚಾರದ ವಸ್ತು ವನ್ನು ಹೇಗೆ ಬಳಸಿಕೊಳ್ಳುತ್ತಿದೆಯೆಂದು ಹೇಳಿದಾಗ್ಯೂ ಪೂರ್ವಾಗ್ರಹ ಪೀಡಿತರಾಗಿರುವುದು ತೀರಾ ಸ್ಪಷ್ಟ.

"ನಮ್ಮ ಸಮಾಜದ ಮಾನಭಂಗಗಳಲ್ಲಿ ಗಂಡಸರದೇ ಪೂರಾ ತಪ್ಪೆಂದು ಹೇಳಲಾಗುವುದಿಲ್ಲ. ವಿದ್ಯೆ ನಾಗರಿಕತೆ ಹೆಚ್ಚಿದೆ. ಹೆಣ್ಣುಮಕ್ಕಳು ಪುರುಷರನ್ನು ಮೀರಿ ಎಲ್ಲಾ ಕ್ಷೇತ್ರದಲ್ಲೂ ದುಡಿಯುತ್ತಾರೆ. ಚಲನಚಿತ್ರ ನೋಡು ತ್ತಾರೆ. ಸ್ವತಂತ್ರ ಇರುತ್ತದೆ. ಉಡುಗೆ-ತೊಡುಗೆ ಮೊಟ ಕಾಗುತ್ತ ಹೋಗಿದೆ. ನಾಭಿಯ ಕೆಳಗಿನ ಸೀರೆ, ತೋಳಿಲ್ಲದ ರವಿಕೆಗಳು, ಪಾರದರ್ಶಕ ಉಡುಪುಗಳು ಉಬ್ಬಿದ ಬ್ರಾ ತೊಡುವಿಕೆ ಇವೆಲ್ಲಾ ಸಾಮಾನ್ಯ. ಅವರ ದುಡ್ಡು, ಅವರ ಸ್ವಾತಂತ್ರ ಮನೆಯ ಹಿರಿಯರ ಒಪ್ಪಿಗೆಯೂ ಇರಬಹುದು ಗಂಡನೂ ಇಷ್ಟಪಡಬಹುದು. ಕೆಲವರು ಹಟದಿಂದಲೂ ಮಾಡಬಹುದು. ಆದರೆ ಇವರೆಲ್ಲ ಸಾರ್ವಜನಿಕ ಸ್ಥಳಗಳಲ್ಲಿ ಓಡಾಡುವರು ಕೆಲಸ ಮಾಡುವರು. ಕೆಲವು ಪುರುಷರು ಮಹಿಳೆಯರ ಉಡಿಗೆ-ತೊಡಿಗೆ, ನಡೆ-ನುಡಿಗಳಲ್ಲಿಯೇ ಅವರ ಸಂಸ್ಕೃತಿಯನ್ನು ಅಳೆದು ಬಿಡುತ್ತಾರೆ. ಇದು ಸ್ವಲ್ಪ ಹಿತ್ತಾಳೆಯೆಂದು ತಿಳಿದರೆ ಆಯಿತು ಎಲ್ಲರ ಕಣ್ಣು ಅವರ ಮೇಲೆಯೆ ಯಾವತ್ತೊ ಒಂದು ದಿನ ಇದು ಅಪಾಯವೆ. ಅದೇ ನಡು ವಯಸ್ಸಿನವರು, ತೀರಾ ವಯಸ್ಸಾದವರು, ಮೈತುಂಬ ಸೀರೆಯುಟ್ಟು ಸೆರಗು ಹೊದೆದು ಗಂಭೀರ ವಾಗಿ ಓಡಾಡಿಕೊಂಡಿರಲಿ ಅಂಥವರಿಗೆ ಯಾವ ಅಪಾಯವೂ ಇಲ್ಲ."

ವಾಣಿಜ್ಯ ಪ್ರಪಂಚವು ಅತ್ಯಾಚಾರದ ವಸ್ತುವನ್ನು ಹಣಗಳಿಸುವ ತಂತ್ರವನ್ನಾಗಿ ಬಳಸುತ್ತಿದೆಯೆನ್ನುವುದರ ಜೊತೆಗೆ ಎಂ. ಕೆ. ಇಂದಿರಾ ವ್ಯಕ್ತಪಡಿಸುವ ಮೇಲಿನ ಅಭಿಪ್ರಾಯಗಳು ಸ್ತ್ರೀವಿರೋಧಿ ಧೋರಣೆಯನ್ನೊಳ ಗೊಂಡಿದೆ.

ಸ್ತ್ರೀಯರು ತೊಡುವ ಉದ್ರೇಕಕಾರಿ ಉಡುಗೆತೊಡುಗೆ ಗಳು ಅತ್ಯಾಚಾರದ ಪ್ರಕರಣಗಳಿಗೆ ಇಂಬುಕೊಡುತ್ತವೆ ಯೆಂಬ ವಾದವನ್ನು ಮುಂದಿಡಲಾಗುತ್ತದೆ. ನ್ಯಾಯಾ ಲಯಗಳಲ್ಲಿ ಬಹುಪಾಲು ಅತ್ಯಾಚಾರದ ಪ್ರಕರಣಗಳನ್ನು

ತೀರ್ಮಾನಿಸುವಾಗ ಈ ವಾದವನ್ನು ಪ್ರಮುಖ ಸಾಕ್ಷಿಯಾಗಿ ಬಳಸಲಾಗುತ್ತದೆ. ಉದ್ರೇಕಕಾರಿ ಉಡುಗೆ ತೊಡುಗೆಗಳೊಂದಿಗೆ ಅತ್ಯಾಚಾರಕ್ಕೆ ಒಳಗಾದ ಸ್ತ್ರೀಯ ಗುಣ-ನಡತೆಯ ಬಗೆ ಲಾಜಿಕಲ್ಲಾದ ತೀರ್ಮಾನಕ್ಕೆ ಬರಲಾಗುತ್ತದೆ. ಹೀಗಿರುವಾಗ ಮೈತುಂಬ ಸೆರಗು ಹೊದ್ದ ಮಹಿಳೆಯರು ಅತ್ಯಾಚಾರಕ್ಕೆ ಒಳಗಾಗುವ ಸಾಧ್ಯತೆಗಳು ಇಲ್ಲ ಎಂಬ ಅಭಿಪ್ರಾಯ ಎಷ್ಟರಮಟ್ಟಿಗೆ ಪ್ರಸ್ತುತ.

ಬೆಳಕಿಗೆ ಬಂದ ಅತ್ಯಾಚಾರ ಪ್ರಕರಣದ ಮಹಿಳೆಯರ ಹಿನ್ನಲೆ, ಕಾರಣಗಳನ್ನು ಗಮನಿಸಿದಾಗ ಈ ವಾದದ ಟೊಳ್ಳುತನ ತಿಳಿಯುತ್ತದೆ.

ಅತ್ಯಾಚಾರಕ್ಕೆ ಒಳಗಾದ ಮಥುರಾ ಹಳ್ಳಿಯಿಂದ ಬಂದ ಹುಡುಗಿಯಾಗಿದ್ದಳಲ್ಲದೆ, ಮೈಮುಚ್ಚಿಕೊಳ್ಳುವಂತೆ ಸೀರೆಯನ್ನು ಉಟ್ಟುಕೊಂಡಿದ್ದಳು. ಹೈದರಾಬಾದ್‌ನಲ್ಲಿ ಪೋಲೀಸರಿಂದ ಅತ್ಯಾಚಾರಕ್ಕೆ ಒಳಗಾದ ರಮೀಜಾಬಿ ಮುಸ್ಲಿಂ ಮಹಿಳೆಯಾಗಿದ್ದು ಮುಖ ಮುಚ್ಚುವಂತೆ ಬುರಕಾ ಹಾಕಿದ್ದಳು. ಕರ್ನಾಟಕದ ಕೋಲಾರ ಜಿಲ್ಲೆಯ ಅನಸೂಯಮ್ಮ ಯಾವುದೇ ರೀತಿಯ ಉದ್ರೇಕಕಾರಿ ಬಟ್ಟೆಯನ್ನು ಧರಿಸಿರಲಿಲ್ಲ. ಹೀಗೆ ಪಟ್ಟಿಯನ್ನ ಮಾಡುತ್ತಾ ಹೋಗಬಹುದು.

ಬೆಳಕಿಗೆ ಬಂದ ಹಾಗೂ ನ್ಯಾಯಾಲಯ ತೀರ್ಪುನೀಡಿದ ಘಟನೆಗಳ ಹಿನ್ನಲೆಯನ್ನು ಪರಿಶೀಲಿಸಿದಾಗ ಅತ್ಯಾಚಾರಕ್ಕೆ ಪ್ರೇರಣೆ ನೀಡಿದ ಸಂಗತಿಗಳು ಬೆಳಕಿಗೆ ಬರುತ್ತವೆ. ಮತೀಯ ಗಲಭೆಗಳು, ಆರ್ಥಿಕ ಕಾರಣ ಆಸ್ತಿ ಜಗಳ, ಪುರುಷ ಪ್ರಧಾನ ಮೌಲ್ಯಗಳು ಮುಂತಾದವುಗಳು ಸ್ತ್ರೀಯರ ಮೇಲೆ ಇಂತಹ ದೌರ್ಜನ್ಯಗಳನ್ನು ನಡೆಸುವಂತೆ ಪುರುಷರನ್ನು ಪ್ರೇರೇಪಿಸುತ್ತಿವೆ.

ಹೀಗೆ ಸಮಾಜದಲ್ಲಿ ಬೇರುಬಿಟ್ಟ ಆರ್ಥಿಕ, ಸಾಮಾಜಿಕ, ಪಿತೃಪ್ರಧಾನ ಮೌಲ್ಯಗಳನ್ನು ಕಡೆಗಣಿಸಿ ಕೇವಲ ಮೇಲು ನೋಟಕ್ಕೆ ಕಂಡು ಬರುವ ಕಾರಣಗಳನ್ನು ನೀಡುವುದು ಸಮಸ್ಯೆಯನ್ನು ಸರಳೀಕರಿಸಿದಂತಾಗುತ್ತದೆ.

ಸ್ತ್ರೀಯರ ಉಡುಗೆ ತೊಡುಗೆಯ ಬಗ್ಗೆ 'ಚ'ಕಾರವೆತ್ತಲಾಗದ ಸಂದರ್ಭದಲ್ಲಿಯೂ ಸ್ತ್ರೀಯ ಗುಣ ನಡತೆಯನ್ನು ಸಂಶಯಿಸಲಾಗುತ್ತದೆ. ಅತ್ಯಾಚಾರಕ್ಕೆ ಒಳಗಾದ ಪ್ರತಿಯೊಬ್ಬ ಸ್ತ್ರೀಯ ಗತ ಚರಿತ್ರೆಯೆನ್ನಲ್ಲಾ ಕೆದಕಿ ತೆಗೆಯಲಾಗುತ್ತದೆ. ಅವಳ ಹಗುರ ನಡತೆಯನ್ನು ಸೂಚಿಸುವಂತೆ ಸುಳ್ಳುಗಳನ್ನು ಸಹ ಸೃಷ್ಟಿಸಲಾಗುತ್ತದೆ. ಅಪರಾಧವೆಸಗಿದ ವ್ಯಕ್ತಿ ಶಿಕ್ಷೆ ಅನುಭವಿಸುವ ಬದಲು ಶಿಕ್ಷಿಸುವ ಪಾತ್ರವಹಿಸುತ್ತಾನೆ.

ಸ್ತ್ರೀಯರು ತೊಡುವ ಉಡುಗೆ ತೊಡುಗೆಯಿಂದಾಗಿ ಅತ್ಯಾಚಾರಕ್ಕೆ ಒಳಗಾಗುತ್ತಾರೆನ್ನುವುದು, ಹಾಗೂ ಕೇವಲ ಹಗುರ ನಡತೆಯ ಸ್ತ್ರೀಯರು ಮಾತ್ರ ಅತ್ಯಾಚಾರಕ್ಕೆ ಒಳಗಾಗುತ್ತಾರೆನ್ನುವುದರ ಮೂಲಕ ಪ್ರಸ್ತುತದಲ್ಲಿ ಬಳಕೆಯಲ್ಲಿರುವ ಸ್ತ್ರೀ ವಿರೋಧಿ ಮೌಲ್ಯಗಳನ್ನು ಬಲಪಡಿಸಿದಂತಾಗುತ್ತದೆ.

ಪ್ರತಿಯೊಬ್ಬ ಹೆಂಗಸೂ, ಯಾವುದೇ ರೀತಿಯ ಬಟ್ಟೆಯನ್ನು ತೊಟ್ಟಿರಲಿ, ಎಷ್ಟೇ ವಯಸ್ಸಿನವಳಾಗಿರಲಿ, ಅತ್ಯಾಚಾರ ಭಯದಿಂದ ನರಳುತ್ತಾರೆ, ಎಲ್ಲ ಸ್ತ್ರೀಯರೂ ಅತ್ಯಾಚಾರಕ್ಕೆ ಒಳಗಾಗುವ ಸಾಧ್ಯತೆಗಳು ಇರುತ್ತವೆ. ವೈಯಕ್ತಿಕವಾಗಿ ಅಂತಹ ಅನುಭವ ತಮಗಾಗಿಲ್ಲವೆಂದು ಹೇಳುವುದರ ಮೂಲಕ ಲೇಖಕಿ ಸಮಸ್ಯೆಯನ್ನು ಸಾಮಾನ್ಯೀಕರಿಸುತ್ತಿದ್ದಾರಲ್ಲದೆ ಅದರ ಸಂಕೀರ್ಣತೆಯನ್ನು ಸರಳಗೊಳಿಸುತ್ತಾರೆ.

ಎಂ. ಕೆ. ಇಂದಿರಾರವರ ವಾದ ವಾಸ್ತವಿಕ ಅಂಶಗಳನ್ನು, ಕಣ್ಣಿಗೆ ರಾಚುವ ನಗ್ನ ಸತ್ಯಗಳನ್ನು ನಿರಾಕರಿಸುತ್ತದೆ. ಪುರುಷ ಪ್ರಧಾನ ಸಂಸ್ಕೃತಿಯ ಫಲಿತಾಂಶದ ಇಂತಹ ವಾದಗಳು ಚಾಲ್ತಿಯಲ್ಲಿವೆ. ಇಂತಹ ಮೌಲ್ಯಗಳನ್ನು ಸ್ತ್ರೀಯರು ಸ್ತ್ರೀಯರ ವಿರುದ್ಧ ಬಳಸುತ್ತಿರುವುದು ಒಂದು ವ್ಯಂಗ್ಯವಲ್ಲವೇ ?

**ರಾಜೇಶ್ವರಿ ಎಚ್. ಎಸ್.**

ಇಂದಿನ ನಮ್ಮ ಯುವಕರು ವರದಕ್ಷಿಣೆ ವಿಷಯದಲ್ಲಿ ಮಾತ್ರ ತಂದೆ-ತಾಯಿಯ ಮಾತು ಮೀರಲಾರರು. ವರದಕ್ಷಿಣೆಯ ವಿಷಯದಲ್ಲಿ ಹಿರಿಯರಿಗೆ ಒಪ್ಪಿಗೆಯಾಗದಿದ್ದಲ್ಲಿ ತಮ್ಮ ಮನಸ್ಸೊಪ್ಪಿದ ಕನ್ಯೆಯನ್ನು ತ್ಯಜಿಸಲು ಸಿದ್ಧರಾದಾರು. ಗಳಿಸುವ ಕನ್ಯೆಯನ್ನೇ ಬಯಸುವ ನಮ್ಮ ಯುವಕರ ಮನೋಭಾವವನ್ನು ಕಾಣುತ್ತಿದ್ದೇವೆ. ಇದೂ ಒಂದು ತರಹ Instalment ವರದಕ್ಷಿಣೆಯ ರೂಪವೆನ್ನಬಹುದು.

# ಮೌನ ಮಾತಾದಾಗ

ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ ; ಅಸಮಾನ ವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗೂ ಅನುಭವಗಳನ್ನು ಪುಟ್ಟ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.

ಸತ್ಯ ಹೇಳಬೇಕೆಂದರೆ ಹೆಣ್ಣಿಗೆ ಹೆಣ್ಣೇ ಶತ್ರು. ಈ ಸಮಾಜದಲ್ಲಿರುವ ಸಾಮಾನ್ಯ ಹೆಣ್ಣು ಮಕ್ಕಳು ನಾಲ್ಕು ಗೋಡೆಗಳ ನಡುವೆ ಇರುವ ಪ್ರಪಂಚವನ್ನು ಬಿಟ್ಟು ಹೊರಗೆ ಬಂದು ವಿಹರಿಸಬಾರದೆ ? ಹೆಣ್ಣಿನ ಪ್ರತಿಭೆ, ಮನೋಭಾವ, ಬೆಳವಣಿಗೆ, ಮನಸ್ಸಿನ್ನಲ್ಲಾಗುತ್ತಿರುವ ಭಾವನೆ, ದುಃಖಗಳನ್ನು ಯಾರಿಗೂ ಹೇಳಿಕೊಳ್ಳಬಾರದೇನು ? ಇವುಗಳಿಗೆ ಅವಳ ತಂದೆ-ತಾಯಿ, ಬಂಧುಗಳು ಇಷ್ಟೇ ಏಕೆ ಸ್ತ್ರೀ ಕಲ್ಯಾಣಕ್ಕಾಗಿ, ಸ್ತ್ರೀಯರ ಉದ್ಧಾರಕ್ಕಾಗಿ, ದುಡಿಯುವವರು ಕೂಡ ತಿಳದುಕೊಳ್ಳುವುದಿಲ್ಲ.

ಮದುವೆ, ಗಂಡ, ಸಂಸಾರ ಇವಷ್ಟೇ ಹೆಣ್ಣಿನ ಜೀವನವಾಗಿರಬೇಕು. ಮಗಳಿಗೆ ಮದುವೆ ಮಾಡೋದನ್ನು ಬಿಟ್ಟರೆ ಇನ್ನೇನನ್ನು ಈ ತಂದೆ–ತಾಯಿಗಳು ಯೋಚಿಸೋದಿಲ್ಲ. ಈ ತಂದೆ-ತಾಯಿಗಳ ಧ್ಯೇಯ, ಗುರಿ ಕೇವಲ ಮದುವೆ. ಹೆಣ್ಣು ಮಕ್ಕಳು ಅಂದರೆ ಸಾಕು ಹೊರಲಾರದ ಭಾರ, ಮಗಳಿಗೆ ಆದಷ್ಟು ಬೇಗ ಮದುವೆ ಮಾಡಿ ಗಂಡನ ಮನೆಗೆ ಕಳಿಸಿಬಿಟ್ಟರೆ ಸಾಕು ಅಂತ ಕೊರಗುತ್ತಾರೆ. ಹೆಣ್ಣಿಗೆ ಓದೇ ಬೇಡಾಂತ ಇವರ ತೀರ್ಮಾನ. ಎಷ್ಟು ಓದಿದರೇನು ಕಡೆಗೆ ಗಂಡನ ಮನೆಗೆ ತಾನೇ ಹೋಗಬೇಕು ಅಂತಾರೆ. ತನ್ನ ಮಾನಸಿಕ ಬೆಳವಣಿಗೆಗಾಗಿ, ಪ್ರಪಂಚದ ತಿಳುವಳಿಕೆಗಾಗಿ ಅಲ್ಲವೇ ಓದು ಇರೋದು ? ಹೆಣ್ಣಿಗೆ ಓದಿಸದೇ ಹೆತ್ತವರು ಅನ್ಯಾಯ ಮಾಡುತ್ತಿದ್ದಾರೆ. ವಿದ್ಯೆ ಇಲ್ಲದಿದ್ದರೆ ತನ್ನ ಅನ್ನ ತಾನು ದುಡಿದು ತಿನ್ನುವ ಚೈತನ್ಯವೂ ಕೂಡ ಇಲ್ಲದೆ ಪರರ ಮುಂದೆ ಕೈವೊಡ್ಡಬೇಕಾಗುತ್ತದೆ. ನಿಜವಾಗಿ ಹೇಳಬೇಕೆಂದರೆ ಹೆಣ್ಣು ಯಾವುದರಲ್ಲೂ ಕಡಿಮೆಯಿಲ್ಲ. ತಾನೇ ಹೆಚ್ಚು ಎಂದು ಭುಜತಟ್ಟಿಕೊಳ್ಳೋ ಗಂಡಿಗಿಂತಾ ಹೆಣ್ಣು ಹೆಚ್ಚು ಶ್ರೇಷ್ಟಳು ಮತ್ತು ಉತ್ತಮಳೂ ಹೌದು. ಹೀಗಿರುವಾಗ ಹೆಣ್ಣನ್ನು ಯಾಕೆ ಕೀಳಾಗಿ ನೋಡಬೇಕು. ಇಂತ ಕೆಟ್ಟ ಸಂಪ್ರದಾಯವನ್ನು ಮೊದಲು ಶುರು ಮಾಡಿದ್ದು, ಸೃಷ್ಟಿ ಮಾಡಿದುದು ಈ ಸಮಾಜ.

ಈ ಸಮಾಜದಲ್ಲಿ ಒಂದು ಹೆಣ್ಣನ್ನು ಕಂಡು ಮತ್ತೊಂದು ಹೆಣ್ಣು ಮತ್ಸರದಿಂದ, ಕೆಟ್ಟ ದೃಷ್ಟಿಯಿಂದ ನೋಡುತ್ತಾಳೆ. ಹೆಣ್ಣಿನ ಮೇಲೆ, ಇಲ್ಲಸಲ್ಲದ ಆರೋಪ ಮಾಡೋದು, ಬೈಯೋದು, ಹೊಡೆಯೋದು ಇವುಗಳು ಕೂಡ ಹೆಣ್ಣಿನಿಂದಲೇ ನಡೆಯುತ್ತವೆ. ಹೀಗೆ ಒಬ್ಬರ ಮೇಲೆ ಒಬ್ಬರು ದೋಷಾರೋಪಣೆ, ಚಾಡಿ ಹೇಳೋದ್ರಿಂದಲೇ ನಮ್ಮ ಹೆಣ್ಣ ಮಕ್ಕಳ ಸ್ಥಿತಿ ಈ ರೀತಿ ಆಗಿರೋದು.

ಒಂದು ಹುಡುಗಿಗೆ ಕೆಟ್ಟ ಹೆಸರಿಡುವುದರಲ್ಲೂ, ಕೀಳಾಗಿ ಕಾಣೋದ್ರಲ್ಲೂ, ಅನ್ಯಾಯ ಮಾಡೋದ್ರಲ್ಲೂ ಈ ಹೆಣ್ಣುಗಳೇ ಮುಂದು. ಇಂದಿನ ಈ ಸಮಾಜದಲ್ಲಿ ಬೋಲ್ಡ್ ಅನ್ನೋ ಪದವನ್ನು ತಪ್ಪರ್ಥದಲ್ಲಿ ಉಪಯೋಗಿಸುತ್ತಿದ್ದಾರೆ. ಪ್ರೀತಿ, ಸ್ನೇಹಗಳಿರಲಿ, ಬಿಡಲಿ, ಈ ಸಮಾಜದ ಭೀತಿ ಅನ್ನೋ ಸೆರಗಲಿ ಎಷ್ಟೋ ಹೆಣ್ಣು ಮಕ್ಕಳು ಬಾಳುತ್ತಿರುವುದಂತು ಖಂಡಿತ. ಎಷ್ಟೋ ಸಾರಿ ಈ ಹೆಣ್ಣು ಮಕ್ಕಳ ಬಾಳಿಗೆ, ಆಸೆ, ಆಕಾಂಕ್ಷೆಗಳಿಗೆ ಬೆಲೇನೇ ಇರೋದಿಲ್ಲ. ತನಗೆ ಸಿಕ್ಕಿದ್ದರಲ್ಲೇ ತೃಪ್ತಿ ಪಡಬೇಕಾಗಿದೆ. ಇದು ಯಾವ ನ್ಯಾಯ ? ಇಂತಹ ಕೆಲವು ಅನ್ಯಾಯಗಳು ನಡಿತಿದ್ದರೂ ಕೂಡ ಅದನ್ನು ನೋಡುತ್ತಾ ಇದು ಅನ್ಯಾಯ, ನಮ್ಮ ಬದುಕನ್ನು ನಾವೇ ರೂಪಿಸಿಕೊಳ್ಳಲಿಕ್ಕೆ, ಇಂತಹ ಶೋಷಣೆ ನಡೆಯದೇ ಇರುವಂತಹ ವ್ಯವಸ್ಥೆ ಬರಲಿ, ಬದುಕಲಿಕ್ಕೆ ಅವಕಾಶ ಮಾಡಿಕೊಡಿ ಅಂತ ಸಿಡಿದೇಳದೇ ನಾವು ಸುಮ್ಮನೇ ಕೂರಬೇಕೇನು ?

ಅಕಸ್ಮಾತ್ ನಾವೇನಾದರೂ ಈ ರೀತಿ ಹೋರಾಡಿದರೆ ಈ ಜನ, ಈ ಸಮಾಜಕ್ಕೆ ನಮ್ಮಂತಹವರು ನಡತೆ ಕೆಟ್ಟವರು ಆಗಿ ಬಿಡುತ್ತೇವೆ ಯಾಕೀ ರೀತಿ ? ಇಂತಹ ಅನ್ಯಾಯಗಳನ್ನು ವಿರೋಧಿಸಬಾರದೇನು ?

ದೊಡ್ಡ ದೊಡ್ಡವರೆಲ್ಲಾ ಸಮಾಜದಲ್ಲಿ ಅನ್ಯಾಯವೇ ತುಂಬಿದೆ. ಆದ್ದರಿಂದ ಈ ಸಮಾಜವನ್ನು ಸರಿಯಾದ ದಾರಿಯಲ್ಲಿ ನಡೆಸಬೇಕು ಅನ್ನೋದರ ಬಗ್ಗೆ 2 ಗಂಟೆ speech ಕೊಡುತ್ತಾರೆಯೇ ಹೊರತು, ಅಂತ ಅನ್ಯಾಯಗಳನ್ನು ಹೊಡೆದೋಡಿಸಲಾರರು. ಯಾಕೆಂದರೆ ನಿಜವಾಗಿಯೂ ಇವರು ಕೋರೋದು ನಮ್ಮ ಪ್ರಗತಿಯನ್ನಲ್ಲ ಇವರು ನಿಜವಾಗಿಯೂ ಕ್ರಾಂತಿಕಾರರೇ, ಬಂಡಾಯಗಾರರೇ ಆಗಿದ್ದಿದ್ದರೆ ಬಹಿರಂಗವಾಗಿ ಇಂತ ಅನ್ಯಾಯಗಳನ್ನು ವಿರೋಧಿಸುತ್ತಿದ್ದರು. ಎಲ್ಲಾ ಕಡೆ ಮೋಸ, ವಂಚನೆನೇ ತುಂಬಿಕೊಂಡಿದೆ. ಈ ಶೋಷಣೆ, ಅನ್ಯಾಯಗಳನ್ನು ನಾವೆಲ್ಲರೂ ಪ್ರತಿಭಟಿಸಬೇಕು. ಸಿಡಿದೆದ್ದು ನಿಲ್ಲಬೇಕು. ವಿದ್ಯೆ ಕಲಿತು ತನ್ನ ಅನ್ನ ತಾನು ದುಡಿಯುವ ಶಕ್ತಿಗಳಿಸಿ ಸ್ವತಂತ್ರರಾಗಬೇಕು.

—ನಿರ್ಮಲ

---

# ಹೆಣ್ಣು ಶಿಶುವಿನ ವರ್ಷದ ನೆನಪಿಗಾಗಿ

ಅಂಬೆಗಾಲಿಕ್ಕುವ 2 ಹೆಣ್ಣು ಮಕ್ಕಳ ತಾಯಿ ಮೀರಾ ಮುಂಬೈನವಳು. ತನ್ನ ಜೀವನಕ್ಕಾಗಿ ಅನುಕೂಲಸ್ಥ ಮನೆಗಳಲ್ಲಿ ಕೆಲಸ ಮಾಡುತ್ತಿದ್ದಳು. ಫ್ಯಾಕ್ಟರಿಯಲ್ಲಿ ಕೆಲಸ ಮಾಡುವ ಆಕೆಯ ಗಂಡ ಕುಡಿದ ಮತ್ತಿನಲ್ಲಿ ಇನ್ನೊಂದು ಹೆಣ್ಣು ಮಗುವನ್ನು ಹೆತ್ತರೆ ಮನೆಯಿಂದ ಹೊರ ಹಾಕುವ ಬೆದರಿಕೆ ಹಾಕಿದ. ಮತ್ತೊಮ್ಮೆ ಗರ್ಭಿಣಿಯಾದಾಗ ಆಕೆ ಗಾಬರಿಗೊಂಡಳು. ಒಳಗಿನ ಭ್ರೂಣ ಮತ್ತೆ ಹೆಣ್ಣಾಗಿದ್ದರೆ ? ಹಾಗು ಹೀಗೂ ಹಣ ಹೊಂದಿಸಿ ಭ್ರೂಣದ ಲಿಂಗ ಪರೀಕ್ಷೆಗೆ ಆಸ್ಪತ್ರೆಗೆ ಹೋದಳು. ಭ್ರೂಣ ಹೆಣ್ಣೆಂದು ಪರೀಕ್ಷೆಯ ನಂತರ ತಿಳಿಯಿತು. ವೈದ್ಯರು ತಾನು ಬಹಳ ನಿಶ್ಶಕ್ತಳಾಗಿರುವುದರಿಂದ ಮಗುವನ್ನು ಹೆರಲು ಸಾಧ್ಯವಿಲ್ಲವೆಂದು, ಗರ್ಭಪಾತ ಮಾಡಿಸಿಕೊಳ್ಳುವುದು ಒಳ್ಳೆಯದೆಂದು ಹೇಳಿರುವರೆಂದು ತನ್ನ ಗಂಡನಿಗೆ ಹೇಳಿ, ಹೇಗೋ ಅವನ ಮನವೊಲಿಸಿ ಗರ್ಭಪಾತ ಮಾಡಿಸಿಕೊಂಡಳು.

ಹೀಗೆ ಹೆಣ್ಣುಮಗು ಜಗತ್ತಿಗೆ ಕಣ್ ಬಿಡುವ ಮೊದಲೇ ಅದರ ಉಸಿರನ್ನೇ ಚಿವುಟಿ ಹಾಕುವ ಕೆಲಸ ನಡೆಯುತ್ತಿದೆ. ಯಾಕೀ ತಾತ್ಸಾರ ? ಅದು ಹೆಣ್ಣೆಂಬ ಕಾರಣಕ್ಕೇ ? ಸಾಂಪ್ರದಾಯಿಕ ಸಮಾಜವು ಹೆಣ್ಣು ಶಿಶುಗಳ ಹತ್ಯೆಗೆ ತನ್ನದೆ ಕ್ರೂರ ಪದ್ಧತಿಗಳನ್ನು ಅನುಸರಿಸಿದರೆ, ಈಗಿನ ಆಧುನಿಕ ಸಮಾಜವು ಭ್ರೂಣಾವಸ್ಥೆಯಲ್ಲೇ ಹೆಣ್ಣನ್ನು ಹೊಸಕಿ ಹಾಕಲು ತಾಂತ್ರಿಕ ಸಲಕರಣೆಗಳೊಂದಿಗೆ ಸುಸಜ್ಜಿತವಾಗಿದೆ. ವ್ಯತ್ಯಾಸವಿಷ್ಟೇ ಹಿಂದೆ ಹುಟ್ಟಿದ ಶಿಶುವನ್ನೇ ಕೊಂದರೆ ಈಗ ಭ್ರೂಣವನ್ನೇ ಚಿವುಟಿ ಹಾಕುವುದು. ಕ್ರೂರತೆಯು ನವಿರಾದ ಮಾದರಿ. ಹೀಗೆ ಆಧುನಿಕ ಸಂಶೋಧನೆ, ತಾಂತ್ರಿಕತೆಗಳು ಹೆಣ್ಣಿಗೆ ಮಾರಕವಾಗಿವೆ.

ಮುಂದುವರೆದ ದೇಶಗಳು ಈ ಸಮಸ್ಯೆಗೆ ಹೊರತಲ್ಲ. ದಕ್ಷಿಣಕೊರಿಯಾದ ಸಿಯೋಲ್‌ನಲ್ಲಿ ಒಬ್ಬ ಮಹಿಳೆ ತನ್ನ ಮೂರನೆ ಮಗುವು ಹೆಣ್ಣಾಗುವುದೆಂದು ತಿಳಿದ ನಂತರ ತನ್ನ ಆರನೆಯ ತಿಂಗಳಿನಲ್ಲಿ (ಗರ್ಭಪಾತ 6ನೇ ತಿಂಗಳಲ್ಲಿ ಹೆಚ್ಚು ಅಪಾಯಕಾರಿ) ಪ್ರಾಣವನ್ನೇ ಪಣಒಡ್ಡಿ ಗರ್ಭಪಾತ ಮಾಡಿಸಿಕೊಂಡಳು. ಈಕೆಗೆ ಮಕ್ಕಳೇ ಇಲ್ಲದಿದ್ದರೂ ಪರವಾಗಿಲ್ಲ ಆದರೆ ಹೆಣ್ಣು ಮಕ್ಕಳು ಬೇಡ.

ಚೀನಾದಲ್ಲಿ ಹೆಣ್ಣು ಮಗುವನ್ನು ಗುಹೆಯಲ್ಲಿ ತೊರೆದು ಬರುವುದು, ಗೋಣಿಚೀಲದಲ್ಲಿ ಕಟ್ಟಿ ನದಿಯಲ್ಲಿ ಎಸೆಯುವುದು, ಕಸದ ಬುಟ್ಟಿಯಲ್ಲಿ ತುರುಕುವುದು, ಬಲವಂತವಾಗಿ ಕೀಟನಾಶಕ ಔಷಧಿ ಕುಡಿಸು

ವುದು, ಪೆಟ್ಟಿಗೆಯಲ್ಲಿಟ್ಟು, ಬಯಲಿನಲ್ಲಿ ಬಿಟ್ಟು ಬರುವುದು–ಇಂತಹ ಹೀನಾಯಕರ ಘಟನೆಗಳು ನಡೆದ ವರದಿಗಳಾಗಿವೆ, 1980–81ರಲ್ಲಿ ಅನಹೋಯಿ ಪ್ರಾಂತ್ಯದಲ್ಲಿ ಹುಟ್ಟಿದ 40ಕ್ಕೂ ಹೆಚ್ಚು ಮಕ್ಕಳನ್ನು ನೀರಿನಲ್ಲಿ ಮುಳುಗಿಸಿ ಕೊಲ್ಲಲಾಯಿತು. 1982ರಲ್ಲಿ ದಕ್ಷಿಣ ಗ್ವಾಂಗ್‌ಡಾಂಗ್ ಪ್ರಾಂತ್ಯದ 2 ಪ್ರದೇಶಗಳಲ್ಲಿ 200ಕ್ಕೂ ಹೆಚ್ಚು ಹೆಣ್ಣು ಶಿಶುಗಳನ್ನು ಕೊಲ್ಲಲಾಯಿತು. ತಾಯಿಯ ಹಾಸಿಗೆಯ ಬಳಿ ಒಂದು ಬಕೆಟ್ ನೀರನ್ನು ಇರಿಸಿ ಹುಟ್ಟಿದ ಮಗು ಹೆಣ್ಣೆಂದು ತಿಳಿದ ಕೂಡಲೆ ಬಕೆಟಿನ ನೀರಿನಲ್ಲಿ ಮುಳುಗಿಸಿದಂತಹ, ಘಟನೆಗಳೂ ವರದಿಯಾಗಿದೆ.

ಭಾರತದಲ್ಲಿ ಅಂಕಿ ಅಂಶಗಳ ಪ್ರಕಾರ 1001 ಜನ ಪುರುಷರಿಗೆ 933 ಜನ ಮಹಿಳೆಯರಿದ್ದಾರೆ. ಮಹಿಳೆಯರ ಸಂಖ್ಯೆ ಕಮ್ಮಿಯಾಗುತ್ತ ಬರುತ್ತಿದೆ. ವರದಕ್ಷಿಣೆ, ಹೆಣ್ಣು ಮಕ್ಕಳನ್ನು ನೋಡಿಕೊಳ್ಳುವುದರ ಬಗ್ಗೆ ಇವರು ಅಸಡ್ಡೆಯೊಂದಿಗೆ ಈಗಿನ ಭ್ರೂಣಹತ್ಯೆಯು ಮಹಿಳೆಯ ಸಂಖ್ಯೆ ಇಳಿಮುಖವಾಗಿರುವುದಕ್ಕೆ ಕಾರಣವಾಗಿದೆ. ಇಂಡಿಯಾ ಹಾಗು ಚೀನದಂತಹ ದೇಶಗಳು ಗರ್ಭಪಾತವನ್ನು ಕುಟುಂಬ ನಿಯಂತ್ರಣದ ಪರಿಣಾಮಕಾರಿ ಸಾಧನವೆಂದು ಕಾನೂನು ಬದ್ಧಗೊಳಿಸಿದೆ. ಇದು ಕಾನೂನಿನ ರಕ್ಷಣೆಯಲ್ಲಿ ಹೆಣ್ಣು ಭ್ರೂಣವನ್ನು ಸುಲಭವಾಗಿ ಗರ್ಭಪಾತ ಮಾಡಿಸಿಕೊಳ್ಳಲು ದಾರಿ ಮಾಡಿಕೊಟ್ಟಿದೆ. ಹೀಗೆ ತಾಂತ್ರಿಕತೆ, ಕಾನೂನು ಎಲ್ಲವೂ ಹೆಣ್ಣಿನ ಬಲಿಗೆ ಸಿದ್ಧವಾಗಿವೆ.

ಆಧುನಿಕತೆಯಾಗಲಿ. ತಾಂತ್ರಿಕತೆಯಾಗಲಿ ಉತ್ತಮ ಬದುಕಿಗೆ ಪೂರಕವಾಗದೆ, ಪಕ್ಷಪಾತಕ್ಕೆ ಪೂರಕವಾದಲ್ಲಿ ಮುಂದೊಂದು ದಿನ ಹೆಣ್ಣನ್ನು 'ಅಳಿವಿನ ಹಾದಿಯಲ್ಲಿರುವ ಜೀವಿಗಳೆಂದು' ಘೋಷಿಸಬೇಕಾಗಬಹುದು !
(ಆಧಾರ : ರೀಡರ್ಸ್ ಡೈಜೆಸ್ಟಿನಲ್ಲಿ ಬಂದ ಲೇಖನ)

ಸರಸ್ವತಿ ದು.



# ಸಂವೇದನೆ

ಮಗ ಬ್ಯಾಂಕಿನಲ್ಲಿ ಸಾಲ ತೆಗೆದುಕೊಳ್ಳಬೇಕಿತ್ತು. ಆತನಿಗೆ ತಾಯಿಯೇ 'ಶ್ಯೂರಿಟಿ' ಹಾಕಲು ಒಪ್ಪಿಗೆಯಿತ್ತು ತಾಯಿ-ಮಗ ಬ್ಯಾಂಕಿಗೆ ಹೋದರು. ಕೆಲವು ಕಾಗದ ಪತ್ರ ಗಳಿಗೆ ಸಹಿ ಹಾಕಬೇಕು.

ಹಾಗೆ ಮಾಡುವಾಗ ಆಕೆಗೊಂದು ಶಾಕ್ ಕಾದಿತ್ತು. ಆಕೆಯ ಮಗ ತಾನು ಇಂಥವರ ಮಗ ಎಂದು ಹೇಳು ವಾಗ ತಂದೆಯ ಹೆಸರು ಹಾಕಿಸಿದ್ದ. ಮತ್ತೆ ಆಕೆ ಸಹಿ ಹಾಕಬೇಕಾದ ಸ್ಥಳದಲ್ಲಿ ಸಹ ಇಂಥವರ ಹೆಂಡತಿ ಎಂತಲೇ ಬರೆಸಿದ್ದ.

ಎಲ್ಲ ಮಾಮೂಲಿಯಾಗಿದ್ದರೆ ಆ ಮಾತು ಬೇರೆ. ಆಕೆ ತನ್ನ ಪತಿಯಿಂದ ಬೇರೆಯಾಗಿ ಹಲವು ವರ್ಷಗಳೇ ಸಂದಿದ್ದವು. ಮತ್ತು ಎಳೆಯ ಮಕ್ಕಳನ್ನು ನಿರ್ಲಕ್ಷ್ಯಮಾಡಿ ಹೊರಟು ಹೋದ ಪತಿಯನ್ನು ಲಕ್ಷಿಸದೆ ತನ್ನ ಮಕ್ಕ ಳನ್ನು ಆಕೆ ವಿದ್ಯೆ-ಉದ್ಯೋಗಾದಿಗಳನ್ನು ಕೊಟ್ಟು ಒಂದು ನೆಲೆಗೆ ತಂದು ನಿಲ್ಲಿಸಿದ್ದಳು. ಆ ಒಂಟಿತನದ ಬದುಕು, ಪ್ರತಿಕ್ಷಣವೂ ಮೂದಲಿಸುವ ಸಮಾಜದ ಎದುರು ಕವುಡಿ ಯಾಗಿ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿದು ತನ್ನ ಮಕ್ಕಳಿಗಾಗಿ ಮತ್ತು ಹಾಗೆ ಬಟ್ಟೆಯನ್ನು ವದರಿದ ಹಾಗೆ ವದರಿ ಹೋದ ಗಂಡನೆದುರು ಆತನಿಗಿಂತ ಮಿಗಿ ಲಾಗಿ ಬದುಕಿ-ಒಂದು ಸ್ಥಾನವನ್ನು ಪಡೆಯುವ ಛಲ ಆಕೆಯ ಎದುರಿಗಿತ್ತು. ಹಾಗೆ ಆಕೆ ಬಹು ದೀರ್ಘಕಾಲ ಶ್ರಮಿಸಿ ಗೆದ್ದೂ ಇದ್ದಳು.

ಒಮ್ಮೆಯೂ ತಂದೆಯ ಬಗ್ಗೆ, ತಾಯಿ ಹಾದು ಬಂದ ಬದುಕಿನ ಸಂಕಷ್ಟದ ಬಗ್ಗೆ ಮಾತನಾಡಿರದ ಮಕ್ಕಳು ಸಜ್ಜನರೇ. ಹಳೆಯದನ್ನ ಕೆದಕದೇ ನಗುತ್ತ ಬದುಕುವ ರೀತಿ ಆಕೆಗೂ ಪ್ರಿಯವೇ ಆಗಿತ್ತು. ಆದರೆ ಆಕೆ ಎಂದೂ ಯಾವ ಕಾರಣಕ್ಕೂ ತನ್ನ ಮಕ್ಕಳ ಪೋಷಕರ ವಿಚಾರ ಬಂದಾಗ ನಡುವಂತರದಲ್ಲಿ ಬಿಟ್ಟು ಹೋದ ಆ ಗಂಡನ ಹೆಸರನ್ನು ಕೊಡಲು ಒಪ್ಪುತ್ತಿರಲಿಲ್ಲ. ಹಾಗೆ ಹೋದ ವ್ಯಕ್ತಿಯ ಬಗ್ಗೆ ಅಗೌರವ ಅಲ್ಲವಾದರೂ ಅಂಥವರಿಗೆ 'ತಂದೆ'ಯ ಜವಾಬ್ದಾರಿ-ಕರ್ತವ್ಯಗಳನ್ನ ನಿರ್ವಹಿಸದವರಿಗೆ ಆ ಸ್ಥಾನಕ್ಕೆ ಸಲ್ಲಬೇಕಾದ ಮರ್ಯಾದೆ ಸಲ್ಲಕೂಡದು. ಯಾರು ಕರ್ತವ್ಯ ನಿರ್ವಹಿಸಿದರೋ ಅವರೇ ಮಾನ್ಯರು ಎಂಬುದು ಆಕೆಯ ನಿಲುವು. ಶಾಲಾ-ಕಾಲೇಜು ಎಲ್ಲೆಡೆ ಸಾಮಾನ್ಯವಾಗಿ ಆಕೆ ಪೋಷಕರ ಕಾಲಂನಲ್ಲಿ ತನ್ನ ಹೆಸ ರನ್ನೇ ಹಾಕುತ್ತಿದ್ದಳು. ಆ ಬಗ್ಗೆ ಸಾಮಾನ್ಯವಾಗಿ ಪುರುಷನ ಹೆಸರಿಗೇ ಮಾನ್ಯತೆ ಎಂಬ ವ್ಯವಸ್ಥೆಗಳ ವಕ್ತಾರರು ಪ್ರಶ್ನಿಸುತ್ತಿದ್ದರು. ಆಕೆ ನಿರ್ಭಿಡೆಯಿಂದ ತನ್ನ ವಿಚಾರ ವನ್ನು ತಿಳಿಸಿ ಆ ಸ್ಥಾನದಲ್ಲಿ ತನ್ನ ಹಕ್ಕುಗಳೇ ಇವೆಯೆಂದೂ ವಾದಿಸುತ್ತಿದ್ದಳು. ಅಕಸ್ಮಾತ್ತಾಗಿಯಾದರೂ 'ಆತ'ನ ಹೆಸರು ಸೇರಿದ್ದಲ್ಲಿ ಹೋಗಿ ಚರ್ಚೆ-ವಾದ ಮಾಡಿ ಬದಲಾ ಯಿಸುತ್ತಿದ್ದಳು.

ಈ ಎಲ್ಲ ಹಿನ್ನೆಲೆ ತಿಳಿದಿದ್ದೂ, ತನ್ನ ತಾಯಿಯ ಸ್ವಾಭಿಮಾನ-ನಿಲುವುಗಳು ಗೊತ್ತಿದ್ದೂ ಆ ತಾಯಿಯ ಮಗ ಹೀಗೆ ತಂದೆಯ ಹೆಸರು ದಾಖಲಿಸಿದಾಗ ಆಕೆ ಸಿಟ್ಟಿ ಗೆದ್ದಳು. ಮತ್ತು ಆ ಬಗ್ಗೆ ಬ್ಯಾಂಕಿನವರೊಡನೆ ಹಾಗ್ವಾ ದಕ್ಕೆ ಇಳಿಯ ಬೇಕಾಯಿತು. "ಹುಡುಗ ತಂದೆಯ ಹೆಸ ರಿಗೇ ಮಾನ್ಯತೆ ಅಂದುಕೊಂಡರೆ ನನ್ನ ಅಭ್ಯಂತರವಿಲ್ಲ. ಆದರೆ ನಾನು ಸಹಿ ಹಾಕುವ ಫಾರಂನಲ್ಲಿ ಆತನ ಹೆಂಡತಿ ಯಾಗಿ ದಾಖಲಿಸಲು ಬಿಡುವುದಿಲ್ಲ" ಎಂದಳು. ಆ ವೇಳೆಗೆ ನೂರಾರು ರೂಪಾಯಿಗಳ ಸ್ಟ್ಯಾಂಪ್ ಪೇಪರ್‌ಗಳ ಮೇಲೆ ಎಲ್ಲವೂ ಟೈಪ್ ಆಗಿ ಸಿದ್ಧವಾಗಿದ್ದವು. ಈ ಕಾರಣ ಕ್ಕಾಗಿ ತಕರಾರೆದ್ದರೆ ಮತ್ತೆ ಅಷ್ಟು ಸ್ಟ್ಯಾಂಪ್ ಪೇಪರ್ಸ್ ತರಬೇಕು-ಕಾಗದ ಪತ್ರ ಮೇಲಧಿಕಾರಿಯ ಸಹಿಗಾಗಿ ಓಡಾಡಬೇಕು...ಇವೆಲ್ಲ ಆಗಲು ಮತ್ತೆ 15 ದಿನವೋ-ತಿಂಗಳೋ ಆಗಿಬಿಡಬಹುದು. ಆದರೆ ಆ 'ಮಗ'ನಿಗೆ ಹಣದ ತುರ್ತು ಎಷ್ಟಿತ್ತೆಂದರೆ ಹೇಗಾದರೂ ಆಕೆ ಸಹಿ ಹಾಕಿ ಬಿಡಲಿ. ಹಣ ಕೈಗೆ ಬಂದರೆ ಸಾಕೆಂಬ ಆಲೋಚನೆ.

ಬ್ಯಾಂಕಿನ ಅಧಿಕಾರಿಗೆ ಈಗ ಪರಿಸ್ಥಿತಿ ಅರ್ಥವಾಗಿತ್ತು. ಆತನ ಮುಖ ಚಿಕ್ಕದಾಯಿತು. "ನನಗೆ ಇದು ಅರ್ಥವಾಗ ಲಿಲ್ಲ, ಸ್ಪಷ್ಟವಾಗಿ ತಿಳಿಯಲಿಲ್ಲ. ಕ್ಷಮಿಸಿ...ಇನ್ನೆರಡು ತಿಂಗಳು ಕಳೆದ ಮೇಲೆ ಹೊಸ ಪೇಪರ್ಸ್ ಸಿದ್ಧ ಮಾಡೋಣ" ಎಂದು ತುಂಬ ವಿನಯದಿಂದಲೇ ಹೇಳಿ ಕೊಂಡರು.

ವ್ಯವಹಾರ-ಪ್ರಸಂಗದ ಮಾತು ಹೇಗೇ ಇರಲಿ ಇಲ್ಲಿ

ಆಕೆಯ ಮನಸ್ಸಿಗೆ ಆದ ಆಘಾತವೆಂದರೆ ತನ್ನ ಕರುಳ ಬಳ್ಳಿಯೇ ಹೀಗೆ ವರ್ತಿಸಿದ್ದರ ಬಗ್ಗೆ. ಆಕೆ ಈ ಕುರಿತು ನನ್ನ ಬಳಿ ಹೇಳಿಕೊಂಡರು. ಕಣ್ಣೀರು ಹಾಕಿದರು. ಆಕೆಯ ಆತ್ಮಾಭಿಮಾನ ಪೆಟ್ಟು ತಿಂದಿತ್ತು. ತಾನು ಪ್ರೀತಿಯಿಂದ ಸರ್ವಸ್ವವನ್ನೂ ತ್ಯಾಗ ಮಾಡಿ ಸಾಕಿದ ಮಗ ಹೀಗೇಕೆ ಮಾಡಿದ ? ಇತರರ ಎದುರು ತಾನು ತಂದೆಯ ಜತೆಗಿಲ್ಲ–ತನ್ನನ್ನು ಸಾಕಿದವಳು ತಾಯಿ ಎಂದು ಹೇಳಲು ಸಂಕೋಚವೆ ? ಹಾಗಾದರೆ ತಾಯಿಯ ಶ್ರಮಕ್ಕೆ ಆತನ ದೃಷ್ಟಿಯಲ್ಲಿ ಯಾವ ಬೆಲೆಯೂ ಇಲ್ಲವೆ ? ಆಕೆಯ ಮನಸ್ಸು ನೋಯುತ್ತದೆಂದು–ಆಕೆ ಇದನ್ನ ಘೋರ ಅಪರಾಧ ಎಂದು ಭಾವಿಸುತ್ತಾಳೆಂದು ತಿಳಿದೂ ಕೂಡ ಹೀಗೆ ನಡೆದು ಕೊಂಡದ್ದು ಏಕೆ ? ತಾಯಿಯ ಸ್ವಾಭಿಮಾನಕ್ಕಿಂತ-ಸತ್ಯಕ್ಕಿಂತ ಆತನಿಗೆ ಮತ್ತಾವ ಆತ್ಮಗೌರವ ಮುಖ್ಯವಾಯಿತು? ಇನ್ನೂ ಈ ಸಮಾಜದಲ್ಲಿ ಸತ್ಯಕ್ಕೆ–ನಿಷ್ಠುರವಾದ ಬದುಕಿಗೆ ಬೆಲೆಯಿಲ್ಲವೆ ? ಹಾಗಾದರೆ ಆಕೆ ತನ್ನನ್ನು ತೊರೆದು ಹೋದ ಗಂಡನಿಗೇ ಅಡಿಯಾಳಾಗಿ ಬದುಕ ಬೇಕಿತ್ತೆಂಬುದು ಆ ಮಗನ ಅಭಿಪ್ರಾಯವೆ ? ಆತ ಆಕೆಯ ಗಟ್ಟಿಯಾದ ನಿರ್ಧಾರವನ್ನು ಮನಸಾ ಒಪ್ಪಿಲ್ಲವೆಂದೇ ಅರ್ಥವಲ್ಲವೆ ? ಹೀಗೆ ಆಕೆ ಹಲವು ಪ್ರಶ್ನೆಗಳನ್ನ ಕೇಳಿಕೊಳ್ಳುತ್ತ ದುಃಖಿಸಿದರು. ವ್ಯವಸ್ಥೆಗಳು-ಸಮಾಜ ಕೂಡಾ ಈ ಹೊತ್ತು ಸರಿಯಾಗಿ ಅರ್ಥ ಮಾಡಿಸಿದ್ದರೆ ಪರಿಸ್ಥಿತಿಗೆ ಹೊಂದಿಕೊಂಡು ಎದುರಿಗಿರುವ ವ್ಯಕ್ತಿಯನ್ನು ಗೌರವಿಸುತ್ತವೆ. ತನ್ನ ಹೊಟ್ಟೆಯ ಮಕ್ಕಳೇ ಅದನ್ನ ಪುರಸ್ಕರಿಸದೆ ತಮ್ಮ ಮರ್ಯಾದೆಗೆ ಕುಂದಾಗಿದೆ ಎಂಬಂತೆ ವರ್ತಿಸಿ ಆಯುತ ಸಮಯದಲ್ಲಿ ತಾಯಿಯ ಮರ್ಯಾದೆಗೆ ಭಂಗ ತರುತ್ತಾರೆ. ಆಕೆಯ ಮನಸ್ಸಿನ ಘಾಸಿ ಅವರಿಗೆ ತಟ್ಟುವುದೇ ಇಲ್ಲ. ಅವರಿಗೆ ಆ ಕ್ಷಣಕ್ಕೆ ಮುಖ್ಯವಾಗುವುದು 'ಹಣ' ಮಾತ್ರ. ಆಕೆ ಈ ಮಾತುಗಳನ್ನ ಹೇಳುತ್ತ "ನೋಡಿ, ಈ ಸಂಬಂಧಗಳು-ಅಂತಃಕರಣ ಎಲ್ಲ ಕೇವಲ ಸುಳ್ಳು-ಪೊಳ್ಳು. ಇರುವುದೆಲ್ಲ ಅವರವರ ಸ್ವಾರ್ಥ–ಸುಖಾಪೇಕ್ಷೆ ಮಾತ್ರ. ಹಣ, ಅಪೇಕ್ಷಿಸಿದ ಸವಲತ್ತುಗಳು ಸಿಗುತ್ತದೆ ಎಂದಾದರೆ ತಾಯಿಯನ್ನೇ ಬೆತ್ತಲು ಮಾಡಿ ಬೀದಿಗಟ್ಟಲು ಹೇಸದ ಮಕ್ಕಳು ಇಂದಿನವರು. ಈ ಹೊತ್ತಿನ ಈ ನನ್ನ ಪ್ರಸಂಗ ಅಂಥದೇ...ನನಗೆ ಹಾಗೇ ಆದಂತೆ ಭಾಸವಾಗುತ್ತಿದೆ" ಅಂದರು.

ನನಗೆ ಉತ್ತರಿಸಲು ಕಷ್ಟವಾಯಿತು. ಅಪ್ರತಿಭಳಾದೆ. ಅಂಥವೇ ಹಲವು ಪ್ರಸಂಗಗಳಲ್ಲಿ ಪಾತ್ರಧಾರಿಯಾಗಿದ್ದ ನನ್ನ ಎದೆಯೊಳಗೆ ಹೂತುಹೋದ ಅನೇಕ ಭಾವನೆಗಳಿಗೆ ಆಕೆ ತುಂಬ-ತುಂಬ ಸರಳವಾಗಿ ಮಾತುಗಳನ್ನು ಜೋಡಿಸಿದ್ದರು....

ನಾನೇನು ಹೇಳಬಹುದಿತ್ತು...
ಹೇಗೆ ಸ್ಪಂದಿಸ ಬಹುದಿತ್ತು !

—ಇಳಾ

## ಚಂದಾದಾರರಿಗೆ

1989ರಿಂದ 90ರವರೆಗೆ ನಾವು ನಿಯತಕಾಲಿಕವಾಗಿ 'ಮಾನಸ' ವನ್ನು ತರಲು ಶ್ರಮಿಸಿದ್ದೇವೆ. ನಿಮ್ಮೆಲ್ಲರ ಸಹಕಾರವಿಲ್ಲದೇ ನಾವು ಪತ್ರಿಕೆಯನ್ನು ಅರ್ಥಪೂರ್ಣವಾಗಿ ತರುವುದು ಅಸಾಧ್ಯ. ನೀವು ಯಾವುದೇ ತಿಂಗಳಲ್ಲಿ ಚಂದಾದಾರರಾಗಿದ್ದರೂ, ಜನವರಿಯಿಂದ ಜನವರಿಗೆ ನೀವು ಚಂದಾ ನವೀಕರಿಸಿ. ಮಹಿಳಾ ಸಂಸ್ಕೃತಿಗೆ ಧ್ವನಿಯಾಗಲು ಶ್ರಮಿಸುತ್ತಿರುವ ನಮ್ಮ ಪತ್ರಿಕೆಗೆ ನಿಮ್ಮೆಲ್ಲರ ಸಹಕಾರ–ಪ್ರೋತ್ಸಾಹಗಳೇ ಬೆಂಬಲ. ಚಂದಾ ನವೀಕರಿಸಿ ಸಹಕರಿಸಿ.

ಸಂ. ಮಂಡಳಿ.

# ಆರೋಗ್ಯಶ್ರೀ

ಎಲ್ಲಾ ಹೆಂಗಸರಲ್ಲೂ ಯೋನಿಯ ಸ್ರಾವ ಸಾಮಾನ್ಯ. ಈ ಸ್ರಾವವು ತೆಳ್ಳಗೆ ಹಾಗು ಬಿಳಿಯ ಬಣ್ಣದ್ದಾಗಿದ್ದು ಒಂದು ರೀತಿ ಲೋಳೆಯಾಗಿರುತ್ತದೆ. ಇದು ಒಣಗಿದ ಮೇಲೆ ಹಳದಿ ಬಣ್ಣಕ್ಕೆ ತಿರುಗಬಹುದು. ಈ ಸ್ರಾವವು ಸಾಮಾನ್ಯವಾಗಿ ಯಾವುದೇ ನವೆ, ಉರಿ. ಊತವನ್ನುಂಟು ಮಾಡುವುದಿಲ್ಲ.

ಸಾಮಾನ್ಯ ಆರೋಗ್ಯವಂತ ಮಹಿಳೆಯರ ಯೋನಿಯಲ್ಲಿ ಹಲವು ಬ್ಯಾಕ್ಟೀರಿಯಗಳು ಬೆಳೆಯುತ್ತವೆ. ಆ ಬ್ಯಾಕ್ಟೀರಿಯಾಗಳಲ್ಲಿ ಕೆಲವು ಯೋನಿಯಲ್ಲಿ ಆಮ್ಲ ವಿರುವಂತೆಮಾಡಿ, 'ಯಿಸ್ಟ್' 'ಫಂಗಸ್' ನಂತಹ ಅಪಾಯಕಾರಿ ಜೀವಾಣುಗಳು ಜಾಸ್ತಿಯಾಗದಂತೆ ನೋಡಿಕೊಳ್ಳುತ್ತವೆ. ಈ ಅಪಾಯಕಾರಿ ಜೀವಾಣುಗಳು ಸ್ರವಿಸುವ ಹಾಳಾದ ವಸ್ತುಗಳು ಹೆಚ್ಚಾದಾಗ ಯೋನಿದ್ವಾರದಲ್ಲಿ ತುರಿಕೆ, ಸೋಂಕು ಉಂಟಾಗುತ್ತವೆ.

## ಯೋನಿಯ ಸೋಂಕು

ಹೀಗಾದಾಗ ಯೋನಿ ಸ್ರಾವ ಹೆಚ್ಚಾಗುತ್ತದೆ. ಉರಿ ಹಾಗು ತುರಿಕೆ ಜಾಸ್ತಿಯಾಗಿ ತೊಡೆಯ ಸಂದಿಗಳಲ್ಲಿ ಉಜ್ಜುಗಾಯಗಳಾಗುತ್ತವೆ. ಕೆಲವೊಮ್ಮೆ ಪದೇ ಪದೇ ಮೂತ್ರ ವಿಸರ್ಜನೆಯಾಗಬಹುದು.

ಈ ಸೋಂಕಿಗೆ ಕಾರಣಗಳೆಂದರೆ :– ಕಡಿಮೆ ಪ್ರತಿರೋಧಕ ಶಕ್ತಿ, (ಕಡಿಮೆ ನಿದ್ದೆ, ಸರಿಯಾದ ಊಟದ ಅಭ್ಯಾಸವಿಲ್ಲದಿರುವುದು, ದೇಹದ ಬೇರೆ ಯಾವುದೇ ಭಾಗದಲ್ಲಿ ಸೋಂಕಿರುವುದು) ಗರ್ಭನಿರೋಧಕ ಮಾತ್ರೆಗಳು, ಬಸಿರು, ಆಂಟಿಬಾಯಾಟಿಕ್‌ಗಳ ಸೇವನೆ, ಯೋನಿಯಲ್ಲಿ (ಮಗು ಹುಟ್ಟುವುದರಿಂದ, ಸಂಭೋಗದಿಂದ) ಉಂಟಾಗುವ ಸೀಳು ಅಥವಾ ಗಾಯಗಳು.

ಸುಲಭವಾಗಿರುವ ಕೆಲವು ಕ್ರಮಗಳನ್ನು ಅನುಸರಿಸುವುದರಿಂದ ಸೋಂಕನ್ನು ಸಂಪೂರ್ಣವಾಗಿ ತಡೆಗಟ್ಟಬಹುದು. ಆ ತಡೆಗಟ್ಟುವ ಕ್ರಮಗಳೆಂದರೆ :–

ಯೋನಿ ಹಾಗು ಮಲದ್ವಾರಗಳನ್ನು ದಿನವೂ ಸ್ವಚ್ಛವಾಗಿ ತೊಳೆಯುವುದು, ಸ್ನಾನದ ನಂತರ ಚೆನ್ನಾಗಿ ಒರೆಸಿ ಆದಷ್ಟು ಒಣಗಿರುವಂತೆ ನೋಡಿಕೊಳ್ಳುವುದು, ಬೇರೊಬ್ಬರ ಒಳ ಬಟ್ಟೆ ಹಾಗು ಟವೆಲ್‌ಗಳನ್ನು ಉಪಯೋಗಿಸದಿರುವುದು, ಆದಷ್ಟು ನೈಲಾನ್ ಕಾಚಾಗಳನ್ನು ಬಿಟ್ಟು ಹತ್ತಿಯ ಕಾಚಾಗಳನ್ನು ಉಪಯೋಗಿಸುವುದು. (ನೈಲಾನ್ ಕಾಚಾಗಳು ಬೆವರನ್ನು ಹೀರಿಕೊಳ್ಳದೆ ಹಾಗೆ ಬಿಡುವುದರಿಂದ ಅಪಾಯಕಾರಿ ಜೀವಾಣುಗಳು ಬೆಳೆಯುವ ಸಾಧ್ಯತೆ ಇದೆ)

ಬಿಗಿಯಾದ ಪ್ಯಾಂಟ್‌ಗಳನ್ನು ಧರಿಸುವುದು ಒಳೆಯದಲ್ಲ. ಮಲದ್ವಾರವನ್ನು ಮುಂದಿನಿಂದ ಹಿಂದಕ್ಕೆ ತೊಳೆಯುವುದು ಆರೋಗ್ಯಕರ. (ಹೀಗೆ ಮಾಡುವುದರಿಂದ ಮಲದ್ವಾರದಲ್ಲಿನ ಬ್ಯಾಕ್ಟೀರಿಯಾಗಳು ಯೋನಿಗೆ ಹೋಗುವುದಿಲ್ಲ)

ನಿಮ್ಮೊಂದಿಗೆ ಲೈಂಗಿಕ ಸಂಪರ್ಕವಿಟ್ಟುಕೊಳ್ಳುವವರು ಶುಚಿಯಾಗಿರುವುದು ಒಳ್ಳೆಯದು. ಅವರು ಸಂಭೋಗಕ್ಕೆ ಮೊದಲು ಜನನೇಂದ್ರಿಯವನ್ನು ಸ್ವಚ್ಛವಾಗಿ ತೊಳೆದು, ಗರ್ಭನಿರೋಧಕವನ್ನು ಬಳಸುವುದು ಆರೋಗ್ಯಕರ.

ನೋವುಂಟುಮಾಡುವ, ಯೋನಿಯಲ್ಲಿ ಉಜ್ಜುಗಾಯವನ್ನುಂಟುಮಾಡುವ ಸಂಭೋಗವನ್ನು ಬಿಡುವುದು ಒಳ್ಳೆಯದು.

ಸಕ್ಕರೆ, ಶರ್ಕರಪಿಷ್ಟಗಳ ಸೇವನೆಯನ್ನು ಕಮ್ಮಿ ಮಾಡಬೇಕು.

ಕೆಲವು ಮಹಿಳೆಯರಲ್ಲಿ ಸಾದಾ ಮೊಸರನ್ನು ಸವರುವುದರಿಂದ ಸೋಂಕು ಕಮ್ಮಿಯಾಗಿದೆ. ಕೆಲವೊಮ್ಮೆ ಆಂಟಿಬಾಯಟಿಕ್‌ಗಳ ಸೇವನೆಯಿಂದ ಒಳ್ಳೆಯ ಬ್ಯಾಕ್ಟೀರಿಯಾಗಳು ನಾಶವಾಗುತ್ತವೆ. ಮೊಸರನ್ನು ಸವರುವುದರಿಂದ ಆ ಬ್ಯಾಕ್ಟೀರಿಯಾಗಳು ಮತ್ತೆ ಬೆಳೆಯಲು ಅವಕಾಶವಾಗುವುದು.

ಕೆಲವು ಮಹಿಳೆಯರಲ್ಲಿ 1 ಅಥವಾ 2 ಚಮಚೆ ವಿನಿಗರ್ (ವಿವಿಧ ಮದ್ಯದ ರಸದಿಂದ ತೆಗೆದ, ದ್ರವರೂಪದಲ್ಲಿನ ಆಮ್ಲ) ಅನ್ನು 1 ಕಪ್ ಬೆಚ್ಚಗಿನ ನೀರಿನಲ್ಲಿ ಬೆರೆಸಿ ಯೋನಿಯವನ್ನು ತೊಳೆಯುವುದರಿಂದ ಸುಧಾರಣೆಯಾಗಿದೆ. ಇದು ಮೊಸರಿನಂತೆ ಆಮ್ಲದಾಯಕವಾದ್ದರಿಂದ ಸೋಂಕನ್ನು ತಡೆಯುವುದು. ಇನ್ನೂ ಕೆಲವು ಮಹಿಳೆಯರಲ್ಲಿ ಸ್ವಚ್ಛ ನೀರಿನಲ್ಲಿ ತೊಳೆಯುವುದರಿಂದ ಅಥವಾ ಬೇಕಿಂಗ್ ಸೋಡಾ ಬೆರೆಸಿದ ನೀರಿನಲ್ಲಿ ತೊಳೆಯುವುದರಿಂದ ಸೋಂಕು ಕಡಿಮೆಯಾಗಿದೆ.

ಸೋಂಕು ಹೋದನಂತರವೂ ಮೇಲಿನ ಕೆಲವು ಕ್ರಮಗಳನ್ನು ಅನುಸರಿಸುವುದು ಆರೋಗ್ಯಕರ

—ಸರಸ್ವತಿ ದು.

(ಕೃಪೆ : ಅವರ್ ಬಾಡೀಸ್ ಅಂಡ್ ಅವರ್ ಸೆಲ್ವ್)

## ಮಹಿಳೆ-ಸಾಹಿತ್ಯ-ಸಮಾಜ

(12ನೇ ಪುಟದಿಂದ)

ಲೀಲಾಬಾಯಿ ಕಾಮತ್, ಎಚ್.ವಿ.ಸಾವಿತ್ರಮ್ಮ ಮೊದಲಾದವರಲ್ಲಿ ಈ ಹಂತದ ಬೆಳವಣಿಗೆಯನ್ನು ಗುರುತಿಸಬಹುದು. ಈ ಲೇಖಕಿಯರ ನಂತರದ ತಲೆಮಾರಿನ ಮುಖ್ಯ ಲೇಖಕಿಯರಲ್ಲಿ ಒಬ್ಬರಾದ ತ್ರಿವೇಣಿ ಈವರೆಗಿನ ಸ್ತ್ರೀತ್ವದ ಎಚ್ಚರದ ಮುಂದುವರಿಕೆಯಾಗಿ, ಬೆಳವಣಿಗೆಯಾಗಿ ಬಂದರು. ನಮ್ಮ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ಸಮಾಜ ಅನುಸರಿಸಿದ ದ್ವಿಸ್ತರ ನ್ಯಾಯ ಪದ್ಧತಿಯಿಂದಾಗಿ ಮಹಿಳೆಯರು ಎದುರಿಸಿದ ಅನೇಕ ಸಮಸ್ಯೆಗಳು, ಅನುಭವಿಸಿದ ಸಂಕಟಗಳು ತ್ರಿವೇಣಿ ಬರವಣಿಗೆಯ ಪ್ರಮುಖ ಕಾಳಜಿಗಳಾದವು. ಹೆಣ್ಣಿನ ಬದುಕಿನ ನಿಯಂತ್ರಕ ಕೇಂದ್ರಗಳಾಗಿರುವ ವಿವಾಹ, ವಿದ್ಯೆ, ಪಾವಿತ್ರ್ಯಾದಿ ಮೌಲ್ಯಗಳ ಬಗ್ಗೆ ತ್ರಿವೇಣಿ ತೋರಿದ ಉದಾರವಾದಿ ದೃಷ್ಟಿಕೋನಕ್ಕೆ ಇಂದಿನ ಬೆಳವಣಿಗೆಯ ಹಿನ್ನೆಲೆಯಲ್ಲಿ ಚಾರಿತ್ರಿಕ ಮಹತ್ವವಿದೆ ಹಾಗೂ ತ್ರಿವೇಣಿ ಎತ್ತಿರುವ ಅನೇಕ ಪ್ರಶ್ನೆಗಳು ತುಂಬಾ ಸಾವಧಾನದಿಂದ ಬದಲಾಗುತ್ತಿರುವ ಈ ಸಮಾಜದಲ್ಲಿ ಇನ್ನೂ ಎತ್ತಲೇಬೇಕಾಗಿರುವ ಪ್ರಶ್ನೆಗಳಾಗಿರುವುದರಿಂದ ಪ್ರಸ್ತುತವೂ ಆಗಿವೆ.

(ತ್ರಿವೇಣಿ :ಒಂದು ಟಿಪ್ಪಣಿ. ಪು. 41-42)

## 'ಅಲಕಾ ಶ್ರೀದೇವಿ'

ಚಂಡಿಗಢದಲ್ಲಿ ನಡೆದ 22ನೇ ರಾಷ್ಟ್ರ ಮಟ್ಟದ ಕಿರಿಯರ ಸೈಕ್ಲಿಂಗ್ ಸ್ಪರ್ಧೆಯಲ್ಲಿ ಕನ್ನಡದ ಹುಡುಗಿಯರಾದ ಅಲಕಾ ಹಾಗೂ ಶ್ರೀದೇವಿ 4 ಬಂಗಾರ 3 ಬೆಳ್ಳಿ ಹಾಗು 3 ಕಂಚಿನ ಪದಕಗಳನ್ನು ಪಡೆದುಕೊಂಡಿದ್ದಾರೆ. ಈ ಇಬ್ಬರು ಇದೇ ವರ್ಷದಲ್ಲಿ ಬೀಜಿಂಗ್‌ನಲ್ಲಿ ನಡೆಯಲಿರುವ ಏಷಿಯನ್ ಕ್ರೀಡಾಕೂಟ 'ಇಂಡಿಯನ್ ಕ್ಯಾಂಪ್‌ಗೆ' ಆಯ್ಕೆಯಾಗಿದ್ದಾರೆ.

ಬಿಜಾಪುರದ ಈ ಇಬ್ಬರು ಹುಡುಗಿಯರ ಸಾಧನೆ ಮೆಚ್ಚಬೇಕಾದ್ದು. ಚಂಡಿಗಢದ ಸ್ಪರ್ಧೆಯಲ್ಲಿ 3 ಬಂಗಾರ ಹಾಗು ಒಂದು ಕಂಚಿನ ಪದಕ ಗಳಿಸಿರುವ ಅಂತಾ ಆಟಗಾರರ ಕುಟುಂಬದಿಂದ ಬಂದವರು ಅಲಕಾಳ ಹಿರಿಯಕ್ಕ ರೇಣುಕಾ. 1985ರಲ್ಲಿ ದಕ್ಷಿಣ ಕೊರಿಯಾದಲ್ಲಿ ನಡೆದ ಏಷಿಯನ್ ಕ್ರೀಡಾ ಕೂಟದಲ್ಲಿ ಭಾಗವಹಿಸಿದ್ದರು. ಮತ್ತೊಬ್ಬ ಅಕ್ಕ ಮಾಯಾ ಹಾಕಿ ಹಾಗೂ ವಾಲಿಬಾಲ್ ಆಟಗಾರ್ತಿ.

ಯಾವುದೇ ಆರ್ಥಿಕ ಸಹಾಯವಿಲ್ಲದೆ ಸ್ವಂತ ಪ್ರಯತ್ನದಿಂದ ಮೇಲೆ ಬಂದ ಶ್ರೀದೇವಿ ಚಂಡಿಗಢದ ಸ್ಪರ್ಧೆಯಲ್ಲಿ 3 ಬೆಳ್ಳಿ ಹಾಗು 2 ಕಂಚಿನ ಪದಕ ಪಡೆದಿದ್ದಾರೆ. ಉತ್ತಮ, ಪೌಷ್ಟಿಕ ಆಹಾರ ಹಾಗು ಉತ್ತಮ ತಾಂತ್ರಿಕ ಮಟ್ಟದ ಸೈಕಲ್ ದೊರೆತರೆ ಗೆಲವು ಖಂಡಿತ ನಮ್ಮದೆ ಎನ್ನುತ್ತಾಳೆ ಈಕೆ. ಅತ್ಯುತ್ತಮ ಸೈಕಲ್‌ಗಳ ಬೆಲೆ 50 ಸಾವಿರ ವಿರುವುದರಿಂದ ತಮಗೆ ಕೊಳ್ಳಲು ಸಾಧ್ಯವೆ ?ಎನ್ನುತ್ತಾರೆ.

ಸಿಗುವ ಸೌಲಭ್ಯಗಳಲ್ಲೇ, ಸಾಧಾರಣ ಸೈಕಲ್‌ಗಳಲ್ಲೇ ಸ್ಪರ್ಧೆಯಲ್ಲಿ ಭಾಗವಹಿಸಿ ಮೇಲಕ್ಕೆ ಕೀರ್ತಿ ತರುವ ಆಸೆ ಇವರದು. ಇವರ ಪ್ರಯತ್ನ ಸಾರ್ಥಕವಾಗಲಿ.

# ಗೋರಿಲ್ಲಾಗಳನ್ನು ಪ್ರೀತಿಸಿದ ಹುಡುಗಿ

ಡಯಾನ್ ಫೊಸ್ಸಿ ತನ್ನ ಜೀವನದ ಅತ್ಯಮೂಲ್ಯ 20 ವರುಷಗಳನ್ನು ಗೋರಿಲ್ಲಾಗಳೊಡನೆ ಸ್ನೇಹ ಜೀವಿಯಾಗಿ ಕಳೆದ ಕಥೆ ರೋಮಾಂಚಕವಾದದ್ದು. ಮಧ್ಯಮ ಆಫ್ರಿಕಾದ ದಟ್ಟ ಕಾಡಿನ ಬೆಟ್ಟವಾಸಿಗಳಾದ ಗೋರಿಲ್ಲಾಗಳು ಅವುಗಳ ಉಗ್ರ ವರ್ತನೆಗೆ ಹೆಸರುವಾಸಿಯಾಗಿದ್ದವು. ಇವುಗಳು ಬದುಕುವ ರೀತಿಯ ಬಗ್ಗೆ ಅಧ್ಯಯನ ಮಾಡಲು "ನ್ಯಾಷನಲ್ ಜಿಯಾಗ್ರಫಿ"ಯ ವತಿಯಿಂದ 6 ತಿಂಗಳ ಯೋಜನೆಯೊಂದಕ್ಕೆ ಅನುಮತಿ ಪಡೆದು, ಒಬ್ಬಂಟಿಯಾಗಿ ಈ ಕಾರ್ಯ ಕೈಗೊಳ್ಳಲು ತಯಾರಿ ನಡೆಸಿದಳು. ಮೊದಲ ಕೆಲವು ದಿನಗಳು ಬಹಳ ಕಷ್ಟ ಎದುರಿಸಿದಳು. ಸ್ಥಳೀಯ ಯುದ್ಧವಿದ್ದುದರಿಂದ ಕಾಡಿನಲ್ಲಿ ಪರಕೀಯಳೊಬ್ಬಳಿಗೆ ಉಳಿಯಲು ಅವಕಾಶ ಕೊಡದೆ ಆಕೆಯ ಪ್ರತಿಯೊಂದು ವಸ್ತುವನ್ನು ನಾಶಮಾಡಿದರು. ಈ ಘಟನೆಯಿಂದ ಬಹಳ ನೊಂದು ಮರಳಿ ನಗರಕ್ಕೆ (ಕೆಂಟುಕಿಗೆ) ಹಿಂತಿರುಗಿ ಮದುವೆ ಮಾಡಿಕೊಂಡು ಸುಖವಾಗಿರುವುದೆಂದು ನಿಶ್ಚಯಿಸುತ್ತಾಳೆ. ಆದರೆ ಆಕೆಗೆ ಆ ಸ್ಥಳ ಬಿಟ್ಟು ಹೋಗಲು ಮನಸ್ಸಿರುವುದಿಲ್ಲ. ಅದೇ ಪ್ರದೇಶದ ಎದುರಿಗೆ ಬೆಟ್ಟದಲ್ಲಿ ಸಾಕಷ್ಟು ಗೋರಿಲ್ಲಾಗಳು ಜೀವಿಸಿಕೊಂಡಿರುವುದೆಂದು ತಿಳಿದುಕೊಂಡು ಮತ್ತೆ ಪ್ರಯತ್ನ ಮುಂದುವರೆಸುತ್ತಾಳೆ. ಅಲ್ಲಿಯ ಕೆಲವು ನಿವಾಸಿಗಳ ಸಹಾಯದಿಂದ ಒಂಟಿಯಾಗಿ ಕಾಡಿನಲ್ಲಿ ಜೀವಿಸಿಕೊಂಡು ಗೋರಿಲ್ಲಾಗಳ ಬದುಕನ್ನು ಅರಿಯಲು ಸುರು ಮಾಡುತ್ತಾಳೆ. 6 ತಿಂಗಳು ಅಂದುಕೊಂಡದ್ದನ್ನು 20 ವರುಷಕ್ಕೆ ಏರಿಸುತ್ತಾಳೆ. ಗೋರಿಲ್ಲಾಗಳೊಡನೆ ಅವಳ ಒಡನಾಟ ಅತ್ಯಂತ ಗಮನೀಯವಾದದ್ದು. ಆಕೆಯ ಅತ್ಯದ್ಭುತ ಅಧ್ಯಯನದಿಂದ ಗೋರಿಲ್ಲಾಗಳ ಬಗೆಗಿನ ತಿಳುವಳಿಕೆ ಬದಲಾಯಿತು. ಅತ್ಯಂತ ಕ್ರೂರ ಅನಿಸಿಕೊಂಡ ಈ ಪ್ರಾಣಿಗಳು ಸ್ನೇಹಮಯ ಎಂಬುದನ್ನು ಪರಿಚಯಿಸಿ ಜನ ಸಮೂಹಕ್ಕೆ ದಂಗು ಬಡಿಸಿದಳು. ಗೋರಿಲ್ಲಾಗಳ ಸನಿಹದಲ್ಲಿದ್ದಾಗ ಅವುಗಳೇ ಶ್ರೇಷ್ಟ ಅವುಗಳ ಮುಂದೆ ಮಾನವ ಕ್ಷುಲ್ಲಕ ಎಂಬ ನಾಟಕವಾಡಿದರೆ ಅವು ಒಲಿಯುವುವು ಎಂಬುದನ್ನು ತೋರಿಸಿಕೊಟ್ಟಳು. ಈ ರೀತಿಯಾದ ಕೂಲಂಕಂಶವಾದ ಅಧ್ಯಯನ ಈವರೆಗೆ ಯಾರೂ ಮಾಡಿರಲಿಲ್ಲ. ಅವುಗಳನ್ನು ಮನಸಾರ ಪ್ರೀತಿಸುವಳು. ಅಧ್ಯಯನದ ಜೊತೆ ಜೊತೆಯಾಗಿ ಅವುಗಳನ್ನು ಮಾನವನ ಧಾಳಿಯಿಂದ ಉಳಿಸಲು ಶತಪ್ರಯತ್ನಪಟ್ಟಳು. ಆಕೆಯ ಸತತ ಪ್ರಯತ್ನ ಫಲವಾಗಿ 1985ರ ವೇಳೆಗೆ ಆ ಪ್ರದೇಶದಲ್ಲಿ ಗೋರಿಲ್ಲಾಗಳ ಸಂಖ್ಯೆ ಗಮನೀಯವಾಗಿ ಬೆಳೆದಿತ್ತು. ಇದರೊಟ್ಟಿಗೆ ಸಾಕಷ್ಟು ಜನರನ್ನು ಎದುರು ಹಾಕಿಕೊಂಡಳು. ಅವರಲ್ಲಿ ಮುಖ್ಯವಾಗಿ ಬಟವಾ ಬುಡಕಟ್ಟು ಜನಾಂಗದವರೊಂದಿಗೆ ನೇರವಾಗಿ ಶತ್ರುತ್ವ ಕಟ್ಟಿಕೊಂಡಳು. ಗೋರಿಲ್ಲಾಗಳನ್ನು ಹಿಡಿದು ಸಾಯಿಸಿ ಅವುಗಳ ಅಂಗಾಂಗಳನ್ನು ಸೌಂದರ್ಯದ ಸಾಧನಗಳಾಗಿ ಉಪಯೋಗಿಸುವ ಪರಿಪಾಟವಿತ್ತು. ಅವುಗಳ ಅಂಗೈಗಳನ್ನು ಆಷ್ ಟ್ರೇಯಾಗಿ ಬಳಸಲು ಬಿಳಿಯನೊಬ್ಬನಿಗೆ ಮಾರುತ್ತಿದ್ದರು. ಇದರಿಂದ ರೋಷಗೊಂಡ ಡಯಾನ್ ಜನಾಂಗದ ಗುಡಿಸಲುಗಳಿಗೆ ಬೆಂಕಿ ಹಚ್ಚಿದಳು. ಈ ರೀತಿಯಾದ ನೇರ ವರ್ತನೆಗಳಿಂದ ಗೋರಿಲ್ಲಾಗಳನ್ನು ರಕ್ಷಿಸುವಲ್ಲಿ ಒಬ್ಬಂಟಿಯಾಗಿ ತೀವ್ರವಾದ ಚಳವಳಿ ಹೂಡಿದಳು. ಇದರಿಂದಾಗಿ 1985ರಲ್ಲಿ ಕೊಲೆಗೀಡಾದಳು. ಆಕೆಯ ಕೊಲೆ ಇನ್ನೂ ರಹಸ್ಯವಾಗೇ ಉಳಿದುಕೊಂಡಿದೆ.

ಗೋರಿಲ್ಲಾಗಳನ್ನು ರಕ್ಷಿಸುವುದರಲ್ಲಿ ತನ್ನ ಜೀವನವನ್ನು ಮುಡಿಪಾಗಿಟ್ಟ ಡಯಾನ್ ಕಥೆ ಆಧರಿಸಿ ಇತ್ತೀಚೆಗೆ ಬೆಂಗಳೂರಿನಲ್ಲಿ "ಗೋರಿಲ್ಲಾಸ್ ಇನ್‌ದ ಮಿಸ್ಟ್" ಎಂಬ ಚಲನಚಿತ್ರ ಪ್ರದರ್ಶನಗೊಂಡಿತು. ಈ ಸಿನಿಮಾದ ವೈಶಿಷ್ಟ್ಯವೆಂದರೆ ನಿರುಂಗ ಬೆಟ್ಟದಲ್ಲೇ ಅದರ shooting ನಡೆದದ್ದು. ಗೋರಿಲ್ಲಾಗಳು ಸ್ನೇಹಮಯವಾಗಿ ವರ್ತಿಸಿದವೆಂದು ಸಿನಿಮಾದ ನಿರ್ದೇಶಕರು ಹೇಳುತ್ತಾರೆ.

—ಸವಿತ

## ಅಂತರ

ಈ ದಾರಿಯಲಿ
ನೀನು ಬರುವ ಮುಂಚೆಯೂ
ಗುಲ್‌ಮೊಹರಿನ ಸುಗ್ಗಿಗಳಿದ್ದವು
ಆದರೆ,
ಹೂವುಗಳ ಬಣ್ಣಗಳೊಡನೆ
ಕನಸುಗಳು ಪೈಪೋಟಿ ನಡೆಸಿರಲಿಲ್ಲ.
ಈ ದಾರಿಯಲಿ
ನೀನು ಬರುವ ಮುಂಚೆಯೂ
ಬೆಳದಿಂಗಳ ರಾತ್ರಿಗಳಿದ್ದವು.
ಆದರೆ,
ಮಿನುಗುವ ಚುಕ್ಕಿಗಳೆಲ್ಲ
ನಿನ್ನ ಕಂಗಳಾಗಿ ನಕ್ಕಿರಲಿಲ್ಲ.
ಈ ದಾರಿಯಲಿ
ನೀನು ಬರುವ ಮುಂಚೆಯೂ
ಮೈ ನಡುಗಿಸುವ ಚಳಿಯಿತ್ತು.
ಆದರೆ,
ತಂಗಾಳಿಯೊಡನೆ ಹೀಗೆ
ನೆನಪುಗಳು ತೂರಿ ಬರುತಿರಲಿಲ್ಲ.
ಈ ದಾರಿಯಲಿ
ನೀನು ಬರುವ ಮುಂಚೆಯೂ
ನಾನು ನಡೆಯುತ್ತಿದ್ದೆ.
ಆದರೆ,
ಪರಿಚಿತರ ನಡುವೆಯೂ
ಒಂಟಿತನ ನನ್ನನ್ನು ಕಾಡಿರಲಿಲ್ಲ.

ಉಜ್ವಲಾ ಜ. ಪುಣಜಗೌಡ

## ಅಕ್ಕ - ಪಕ್ಕ

ಚಲನಚಿತ್ರಗಳಿಂದ ನಾನು ನಿರಾಶಳಾಗಿದ್ದೇನೆ. ಅಲ್ಲಿ ಮಹಿಳಾ ಪಾತ್ರಗಳಿಗೆ ಪ್ರಾಮುಖ್ಯವೇ ಇಲ್ಲ. ನಟಿಯ ಸಾಮರ್ಥ್ಯವನ್ನು ಸರಿಯಾಗಿ ಉಪಯೋಗಿಸಿ ಚಲನಚಿತ್ರ ನಿರ್ಮಿಸುವವರು ಇಲ್ಲವೆಂದೇ ಹೇಳಬೇಕು.

—ಭಾರತೀ ಆಚರೇಕರ
ಮರಾಠಿ ರಂಗ ನಟಿ

ಚಿತ್ರ ನಿರ್ದೇಶನದಲ್ಲಿ ಸ್ತ್ರೀ - ಪುರುಷರೆಂಬ ಭೇದ ಮುಖ್ಯವೇ ಅಲ್ಲ. ಚಿತ್ರೀಕರಣದಲ್ಲಿ ತಲ್ಲೀನಳಾಗಿದ್ದಾಗ ದೈಹಿಕ ಅಥವಾ ಮಾನಸಿಕ ವ್ಯತ್ಯಾಸಗಳ ಅರಿವಿರುವುದಿಲ್ಲ.

—ಸಾಯಿ ಪರಾಂಜಪೆ
ಖ್ಯಾತ ಚಲನಚಿತ್ರ ನಿರ್ದೇಶಕಿ

ನನ್ನ ಮಕ್ಕಳನ್ನು ಬೆಳೆಸುವ ಸುರಕ್ಷೆಗಾಗಿ ನಾನು ನಟಿಸುತ್ತಿದ್ದೇನೆ.

—ಅಪರ್ಣಾಸೇನ್
ಚಿತ್ರ ನಟಿ ಹಾಗೂ ನಿರ್ದೇಶಕಿ

ಗೆಲುವು ಎನ್ನುವುದು ನಿಜವಾಗಿಯೂ ಒಂದು ಮಜಾ. ಒಂದಲ್ಲ ಒಂದು ದಿನ ಸ್ಟೆಫಿಗ್ರಾಫಳನ್ನು ಸೋಲಿಸುವುದು ನನ್ನ ತಯಾರಿಯ ಉದ್ದೇಶ.

—ಜೆನಿಫರ್ ಕ್ಯಾಪ್ರಿಯಾಟಿ
ಟೆನಿಸ್‌ನ ಹೊಸತಾರೆ

ಅಭಿವೃದ್ಧಿಯೆಂದರೆ ರಸ್ತೆಗಳ ನಿರ್ಮಾಣ, ಪೌರ ಕಟ್ಟಡಗಳ ನಿರ್ಮಾಣವಲ್ಲ. ಜನರ ಜೀವನವನ್ನು ಸುಖಮಯವನ್ನಾಗಿಸುವುದು ಅಭಿವೃದ್ಧಿ ಎಂದು ನಾನು ನಂಬಿದ್ದೇನೆ.

—ಮೇನಕಾಗಾಂಧಿ
ಕೇಂದ್ರ ಪರಿಸರ ಮಂತ್ರಿ

# ಸುದ್ದಿ ಸಂಕಲನ

## ಅತ್ಯಾಚಾರದ ಕಾನೂನು

ಅತ್ಯಾಚಾರ ಅಪರಾಧಕ್ಕೆ ನೀಡುವ ಶಿಕ್ಷೆಗೆ ಸಂಬಂಧಿಸಿದ ಕಾನೂನಿನಲ್ಲಿ ತಿದ್ದುಪಡಿ ತರಲು ಕೇಂದ್ರ ಸರ್ಕಾರ ಪರಿಶೀಲಿಸುತ್ತಿದೆ. ವಿಶೇಷ ಕಾರಣಗಳಿಗಾಗಿ ಅಪರಾಧಿಗೆ ಕನಿಷ್ಠ ಅವಧಿಗಿಂತ ಕಡಿಮೆ ಜೈಲು ಶಿಕ್ಷೆ ವಿಧಿಸಿದಂತಹ ಸಂದರ್ಭಗಳಲ್ಲಿ ಮಹಿಳೆಯ ಚಾರಿತ್ರ್ಯ, ಗೌರವ, ಸ್ಥಾನಮಾನ ಅಥವಾ ಇನ್ನಾವುದೇ ಗುಣಶೀಲಗಳನ್ನು ನ್ಯಾಯಾಲಯಗಳು ಗಣನೆಗೆ ತೆಗೆದುಕೊಳ್ಳಬಾರದು ಎಂದು ಕೇಂದ್ರ ಗೃಹಖಾತೆ ರಾಜ್ಯ ಸಚಿವ ಸುಬೋದ್ ಕಾಂತ್ ಲೋಕಸಭೆಗೆ ತಿಳಿಸಿದ್ದಾರೆ.

ಅತ್ಯಾಚಾರ, ದ್ವಿಪತ್ನಿತ್ವ ಹಾಗೂ ವಿವಾಹ ಬಾಹಿರ ಅನೈತಿಕ ಸಂಬಂಧಗಳಿಗೆ ಸಂಬಂಧಿಸಿದಂತೆ ಕ್ರಿಮಿನಲ್ ಕಾನೂನಿನಲ್ಲಿ ತಿದ್ದುಪಡಿ ತರಬೇಕೆಂದು ಈ ಸಂಘಟನೆಗಳು ಬಯಸಿವೆ. ಆದರೆ ನಿರ್ದಿಷ್ಟ ಸಲಹೆ ಸೂಚಿಸಿಲ್ಲ ಎಂದು ಸಚಿವರು ಹೇಳಿದರು.

## ಮಹಿಳಾ ಆರೋಗ್ಯ

ಶಾಸನದ ಅಧಿಕಾರ ಇರುವ ಮಹಿಳಾ ಆಯೋಗವೊಂದನ್ನು ಸ್ಥಾಪಿಸಲು ಸರ್ಕಾರ ನಿರ್ಧರಿಸಿದೆ ಎಂದು ವಿ.ಪಿ.ಸಿಂಗ್ ಪ್ರಕಟಿಸಿದ್ದಾರೆ. ರಾಷ್ಟ್ರದ ಸಾಮಾಜಿಕ ಹಾಗೂ ಆರ್ಥಿಕ ರಂಗದಲ್ಲಿ ಹೆಚ್ಚು ಪರಿಣಾಮಕಾರಿ ಪಾತ್ರ ನಿರ್ವಹಣೆ ಮತ್ತು ಮಹಿಳೆಯರ ಘನತೆ, ಆತ್ಮವಿಶ್ವಾಸದ ಬಲ ಹೆಚ್ಚಿಸುವುದು ಈ ಆಯೋಗ ರಚನೆಯ ಮುಖ್ಯ ಉದ್ದೇಶ ಎಂದು ಅವರು ಹೇಳಿದ್ದಾರೆ.

## ಗ್ರೆಟಾ ಗಾರ್ಬೊ

ಚಿತ್ರರಂಗದ ವೃತ್ತಿ ಜೀವನದಲ್ಲಿ ಉತ್ತುಂಗದಲ್ಲಿದ್ದಾಗಲೇ ಚಿತ್ರರಂಗಕ್ಕೆ ವಿದಾಯ ಹೇಳಿದ ಸ್ವೀಡಿಷ್ ಸಂಜಾತೆ ಹಾಲಿವುಡ್ ನಟಿ ಗ್ರೆಟಾ ಗಾರ್ಬೊ (84) 1990ರ ಏಪ್ರಿಲ್ 15 ರಂದು ನ್ಯೂಯಾರ್ಕ್ ಆಸ್ಪತ್ರೆಯಲ್ಲಿ ನಿಧನರಾದರು. ಹಾಲಿವುಡ್ ಬೆಡಗಿಗೆ ಬೆನ್ನು ತಿರುಗಿಸಿದ ನಂತರ ಐದು ದಶಕಗಳ ಕಾಲ ಹೊರ ಪ್ರಪಂಚದಿಂದ ದೂರವಾಗಿ ತಾವು ಬಯಸುತ್ತಿದ್ದಂತಹ ಒಂಟಿತನದ ಬದುಕು ನಡೆಸಿದರು. ಹೀಗಾಗಿ ಗಾರ್ಬೊ ಬದುಕು-ಸಾವಿನ ಸುತ್ತ ನಿಗೂಢತೆ ಆವರಿಸಿದೆ.

## ಸಂಖ್ಯಾ ಬಲ

ಅಮೆರಿಕದಲ್ಲಿ ಪುರುಷರ ಸಾವಿನ ಪ್ರಮಾಣ ಕಡಿಮೆಯಾಗಿದ್ದು, ಪುರುಷರ ಜನಸಂಖ್ಯೆ ಪ್ರಮಾಣ ಮಹಿಳೆಯರಿಗಿಂತ ತ್ವರಿತವಾಗಿ ಹೆಚ್ಚಾಗುತ್ತಿದೆ. ಮಹಿಳೆಯರಲ್ಲಿ ಕ್ಯಾನ್ಸರ್ ಸಾವಿನ ಪ್ರಮಾಣ ಹೆಚ್ಚಾಗುತ್ತಿದ್ದು ಪುರುಷರಲ್ಲಿ ಇದು ಕಡಿಮೆ ಆಗುತ್ತಿರುವುದು ಇದಕ್ಕೆ ಕಾರಣ ಎಂದು ವಿಶ್ಲೇಷಿಸಲಾಗಿದೆ. 1960ರ ದಶಕದಿಂದ ಮಹಿಳೆಯರಲ್ಲಿ ಧೂಮಪಾನ ಪ್ರವೃತ್ತಿ ಹೆಚ್ಚಾಗಿರುವುದು ಇದಕ್ಕೆ ಕಾರಣ ಹೀಗಿದ್ದರೂ ಅಮೆರಿಕದಲ್ಲಿ ಈಗಲೂ ಮಹಿಳೆಯರ ಸಂಖ್ಯೆಯೇ ಹೆಚ್ಚು. ಇಲ್ಲಿ ಮಹಿಳೆಯರ ಸಂಖ್ಯೆ 127 ದಶಲಕ್ಷ, ಪುರುಷರ ಸಂಖ್ಯೆ 121 ದಶಲಕ್ಷ.

## ಪ್ರಶಸ್ತಿ

ಸುಪ್ರೀಂ ಕೋರ್ಟಿನ ಪ್ರಥಮ ಮಹಿಳಾ ನ್ಯಾಯಾಧೀಶೆ ಫಾತಿಮಾ ಬೀಬಿ, ಚಿತ್ರನಟಿ ಶರ್ಮಿಳಾ ಟಾಗೋರ್ ಹಾಗೂ ಪುದುಚೇರಿ ಲೆಫ್ಟಿನೆಂಟ್ ಗವರ್ನರ್ ಚಂದ್ರಾವತಿ ಸೇರಿ ಒಟ್ಟು 31 ಮಹಿಳೆಯರಿಗೆ ತಂತಮ್ಮ ಕ್ಷೇತ್ರಗಳಲ್ಲಿ ಸಲ್ಲಿಸಿದ ಉತ್ತಮ ಸೇವೆಗಾಗಿ 1989ರ ಸಾಲಿನ ಶಿರೋಮಣಿ ಪ್ರಶಸ್ತಿ ನೀಡಲಾಗಿದೆ.

## ಮಹಿಳಾ ಸೈನಿಕರು

ಏಷ್ಯಾದಲ್ಲೇ ಮೊದಲನೆಯದಾದ ಭಾರತೀಯ ಕೇಂದ್ರ ಮೀಸಲು ಪಡೆಯ ಮಹಿಳಾ ಅರೆ ಮಿಲಿಟರಿ ಪಡೆ ಈಗ ಗಲಭೆಗ್ರಸ್ತ ಕಾಶ್ಮೀರದಲ್ಲಿ ಕಾರ್ಯಾಚರಣೆ ನಡೆಸುತ್ತಿದೆ.

ಮೀರಟ್ ಕೋಮು ಗಲಭೆ, ರಾಮಜನ್ಮಭೂಮಿ ಮತೀಯ ಉದ್ರಿಕ್ತತೆ ಸಮರ್ಥವಾಗಿ ಶಮನ ಮಾಡಿದ ಖ್ಯಾತಿ ಈ ಯುವತಿಯರದು. ಶ್ರೀಲಂಕಾಗೆ ತೆರಳಿದ್ದ ಭಾರತೀಯ ಶಾಂತಿ ಸೇನಾ ಪಡೆ (ಐಪಿಕೆಎಫ್)ಯಲ್ಲೂ ಈ ಯುವತಿಯರದು ಶ್ಲಾಘನೀಯ ಸೇವೆ ಎಂದು ಗುರುತಿಸಲಾಗಿದೆ.

ನಂ. ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್ : 284/8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ,
ಕಾಡುಗೋಡಿ
ಬೆಂಗಳೂರು-560 067

ಸೂಚನೆ :
ಬಿಡಿಪ್ರತಿ : 2-00 ರೂ.
ವಾರ್ಷಿಕ ಚಂದಾ : 20-00 ರೂ.
ಆಜೀವ ಚಂದಾ : 250 ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ ಒಟ್ಟು ಹನ್ನೊಂದು ಸಂಚಿಕೆಗಳು,
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ.ಓ. ಮೂಲಕ ಸ್ವೀಕರಿಸಲಾಗುವುದು.